# ಬೈಗುಳ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ

## ಪ್ರಬೋಧಾಶ್ರಮ




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (85) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org



# ಬೈಗುಳ ಜ್ಞಾನ
# ಆಶೀರ್ವಾದಗಳ ಅಜ್ಞಾನ


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (85) ದಶ ಅಷ್ಟಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜನವರಿ–2017

ಪ್ರತಿಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ-ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ– ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ– ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ– ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು– ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ – ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : ಲಕ್ಷ್ಮಿನಾರಾಯಣಾಚಾರಿ–09440556968. ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಬೈಗಳ ಜ್ಞಾನ – ಆಶೀರ್ವಾದಗಳ ಅಜ್ಞಾನ 09

ಮನುಷ್ಯ ತನ್ನ ಜೀವನದಲ್ಲಿ ಸುಖಗಳನ್ನೇ ಕೋರಿಕೊಳ್ಳುತ್ತಾನೆ. ಕಷ್ಟಗಳನ್ನು ಬೇಡವೆಂದುಕೊಳ್ಳುತ್ತಾನೆ. ತನಗೆ ಯಾವ ಚಿಕ್ಕ ಕಷ್ಟಬಂದರೂ ಅದು ಇಲ್ಲದೇ ಹೋಗಬೇಕೆಂದು ಆಲೋಚನೆ ತನ್ನಲ್ಲಿ ಹುಟ್ಟಿಬರುತ್ತಿದೆ. ತಾನು ಅಂದುಕೊಂಡಷ್ಟು ಮಾತ್ರಕ್ಕೆ ಆ ಕಷ್ಟ ಹೋಗದೆಂದು ತಿಳಿದ ಮನುಷ್ಯ ಇತರರ ಸಹಾಯ ಕೋರುವುದು ಸಹಜ. ಇತರ ಮನುಷ್ಯರಿಂದ ಕೂಡ ತೊಲಗದ ಕಷ್ಟವನ್ನು ಕುರಿತು ಮನುಷ್ಯರಿಗಿಂತ ದೊಡ್ಡವನಾದ ದೇವರನ್ನು ಅರ್ಥಿಸುವುದು ಮನುಷ್ಯನಿಗೆ ಅಭ್ಯಾಸವಾಗಿಹೋಗಿದೆ. ಹಾಗೆ ಕಷ್ಟಗಳಲ್ಲಿ ಇರುವವರು ಇರುವ ಕಷ್ಟ ಹೋಗಬೇಕೆಂದು ಕೆಲವರು, ಯಾವ ಕಷ್ಟ ಇಲ್ಲದವರು ತಮಗಿರುವ ಸುಖಗಳಿಂದ ಸಂತೃಪ್ತಿಹೊಂದದೆ ಹೊಸ ಸುಖಗಳು ಬೇಕೆಂದು ಕೆಲವರು ದೇವರನ್ನು ಕೋರಿಕೊಳ್ಳುತ್ತಿರುತ್ತಾರೆ. ಹೀಗೆ ಕೋರುವುದು ಎರಡು ವಿಧಗಳಾಗಿ ಇದೆ. ಒಂದು ಮನುಷ್ಯ ಸಾಟಿ ಮನುಷ್ಯನನ್ನು ಕೋರುವುದು, ಎರಡನೆಯದು ಮನುಷ್ಯ ದೇವರನ್ನು ಕೋರುವುದು. ಕೋರುವ ಕೋರಿಕೆ ಕೂಡ ಎರಡು ವಿಧಗಳಾಗಿ ಇದೆ. ಒಂದು ಇರುವುದು ಹೋಗಬೇಕೆಂದು ಕೋರುವುದು ಎರಡನೆಯದು ಇಲ್ಲದಿರುವುದು ಬರಬೇಕೆಂದು ಕೋರುವುದು, ಇದರಿಂದ ಮನುಷ್ಯನ ಕೋರಿಕೆಗಳು ಎರಡು ವಿಧಗಳೆಂದು, ಕೋರುವ ವಿಧಾನಗಳು ಕೂಡ ಎರಡು ವಿಧಗಳೇ ಎಂದು ತಿಳಿಯುತ್ತಿದೆ.

ಮಾನವನು ಆಶಾಜೀವಿ ಆದ್ದರಿಂದ ಕೋರುವುದು ವಾಸ್ತವವೇ. ನೆರವೇರಿಸುವವನಾದ ಮತ್ತೊಬ್ಬ ಮನುಷ್ಯನ ನಂತರ ದೇವರು ವಾಸ್ತವವಾ ಅಲ್ಲವಾ ಎನ್ನುವುದೆ ಪ್ರಶ್ನೆ. ಮನುಷ್ಯ ಮತ್ತು ದೇವರು ವಾಸ್ತವವೇ ಆದರೂ ಕೋರಿಕೆಗಳು ನೆರವೇರಿಸುವ ವಿಷಯದಲ್ಲಿ ಯಾರಿಗೆಷ್ಟು ಪಾತ್ರ ಇದೆಯೋ ಹೇಳಲಾರೆವು. ಮನುಷ್ಯ ತನ್ನ ಕೋರಿಕೆಗಳ ನಿಮಿತ್ತ ಸಾಟಿ ಮನುಷ್ಯನನ್ನು, ಎದುರಿಗಿರುವ ದೇವರನ್ನು ಗೌರವಿಸುವುದು ನಡೆಯುತ್ತಿದೆ. ತನ್ನ ಕೆಲಸಕ್ಕಾಗಿ ಅಥವಾ ಕೋರಿಕೆಗಾಗಿ ಇನ್ನೊಬ್ಬರನ್ನು ಗೌರವಿಸುವುದರಲ್ಲಿ ಕೆಲವು ಪದ್ಧತಿಗಳು ಮನುಷ್ಯ ಅವಲಂಭಿಸಿದ್ದಾನೆ. ಆ ಪದ್ಧತಿಗಳಲ್ಲಿ ಒಂದು ಹೊಗಳುವುದು, ಎರಡು

ಭಜನೆಮಾಡುವುದು, ಮೂರು ನಮಸ್ಕರಿಸುವುದು, ನಾಲ್ಕು ಆರಾಧಿಸುವುದು (ಪೂಜಿಸುವುದು). ಒಂದುಕೆಲಸ ನೆರವೇರುವುದಕ್ಕೆ ಇಂಥವನಿಂದ ಈ ಕೆಲಸ ನಡೆಯುತ್ತದೆಂದು ತಿಳಿದು ಆತನನ್ನು ಆಶ್ರಯಿಸಬಹುದು. ಹಾಗೆಯೇ ಒಂದು ಕೋರಿಕೆ ನೆರವೇರುವುದಕ್ಕೆ ದೇವರನ್ನು ಆಶ್ರಯಿಸುವುದರಲ್ಲಿ ಮನುಷ್ಯ ಪೊರಪಾಟು ಬಿದ್ದಿದ್ದಾನೆ. ಏಕೆಂದರೆ! ಪ್ರಪಂಚಕ್ಕೆಲ್ಲ ಒಂದೇ ದೇವರಿರುವಾಗ ಆತನನ್ನು ಗುರುತಿಸುವುದರಲ್ಲಿ ಗೊಂದವಾಗಿ ದೇವರ ಸ್ಥಾನದಲ್ಲಿ ಬಹಳಜನರನ್ನು ದೇವತೆಗಳಾಗಿ ಮನುಷ್ಯ ಭಾವಿಸಿಕೊಳ್ಳುತ್ತಿದ್ದಾನೆ. ಒಂದು ಕೆಲಸದ ನಿಮಿತ್ತ ಆ ಕೆಲಸ ಯಾರ ಕೈಲಾಗುತ್ತದೊ ತಿಳಿದು ಮನುಷ್ಯರನ್ನು ಆಶ್ರಯಿಸಿದ ಮನುಷ್ಯ, ಹಾಗೆಯೇ ಒಂದು ಕೋರಿಕೆ ಯಾರಿಂದ ನೆರವೇರುತ್ತದೊ ತಿಳಿಯದೆ ಬಹಳಜನರಿಗೆ ದೇವತೆಗಳನ್ನು ಆಶ್ರಯಿಸುತ್ತಿದ್ದಾನೆ. ಆದ್ದರಿಂದ ಮನುಷ್ಯನಿಗೆ ಬಹಳಜನ ದೇವತೆಗಳು ಅಗತ್ಯವಾಗಿದ್ದಾರೆ. ತನ್ನ ಅವಶ್ಯಕತೆಗೋಸ್ಕರ ಹೊಸ ಹೊಸ ದೇವತೆಗಳನ್ನು ಮನುಷ್ಯ ಸೃಷ್ಟಿಸಿಕೊಳ್ಳುತ್ತಲೇ ಇದ್ದಾನೆ. ಎಲ್ಲವುದಕ್ಕು ಆದಿಕರ್ತನಾದ ಪರಮಾತ್ಮನೆ ಎನ್ನುವ ದೇವರನ್ನು ಬಿಟ್ಟು ಅನೇಕ ದೇವರುಗಳನ್ನು ಭಜಿಸುವುದು, ಪೂಜಿಸುವುದು ಅಜ್ಞಾನವೇ ಎನ್ನುವುದು ಈಗ ಸಂದರ್ಭವಲ್ಲ. ಪ್ರಸ್ತುತವಿರುವ ವಿಷಯವೇ ಇಲ್ಲಿ ಚರ್ಚನೀಯಾಂಶ, ಆದ್ದರಿಂದ ಮನುಷ್ಯ ಆಸೆಯನ್ನು ಮತ್ತು ಕೋರಿಕೆಗಳನ್ನು ಮಾತ್ರ ವಿವರಿಸಿಕೊಳ್ಳೋಣ.

ಒಬ್ಬ ಮನುಷ್ಯ ತನ್ನ ಕೋರಿಕೆ ನಿಮಿತ್ತ ಮತ್ತೊಬ್ಬ ಮನುಷ್ಯನನ್ನು ಆಶ್ರಯಿಸುವುದು ನೋಡುತ್ತಲೇ ಇದ್ದೇವೆ. ಹಾಗೆಯೇ ಮನುಷ್ಯ ಅನೇಕ ವಿಧಗಳಾದ ದೇವತೆಗಳನ್ನು ಆಶ್ರಯಿಸುವುದು ಕೂಡಾ ನೋಡುತ್ತಿದ್ದೇವೆ. ದೇವತೆಗಳನ್ನು ಆಶ್ರಯಿಸಿ ಆರಾಧಿಸುವ ಮನುಷ್ಯನಿಗೆ ಆ ದೇವರು ಏನುಕೊಡುತ್ತಿದ್ದಾನೊ ಏನು ಮಾಡುತ್ತಿದ್ದಾನೊ ಕಾಣಿಸದ ವಿಷಯ. ಅದನ್ನು ಕುರಿತು ನಾವು ಏನು ಹೇಳಿದರು ನಂಬದ ಪರಿಸ್ಥಿತಿಯೇ ಉಳಿಯುತ್ತದೆ. ಆದ್ದರಿಂದ ದೇವತಗಳ ವಿಷಯ ಬಿಟ್ಟು ಕೇವಲ ಮನುಷ್ಯರ ವಿಷಯವನ್ನು ಮಾತ್ರ ವಿವರಿಸಬೇಕೆಂದುಕೊಂಡಿದ್ದೇವೆ.

ಒಬ್ಬ ಮನುಷ್ಯ ತನಗೆ ನಂಬಿಕೆಯಿರುವ ವ್ಯಕ್ತಿಯನ್ನು ಆಶ್ರಯಿಸಿದಾಗ ಆತನನ್ನು ಗೌರವಭಾವನೆಯಿಂದ ನೋಡುವುದು ಸಹಜ. ಗೌರವ ನಿಮಿತ್ತ ನಮಸ್ಕರಿಸುವುದು ಪಾದಾಭಿವಂದನೆ ಮಾಡುವುದು ನಡೆಯುತ್ತಿದೆ. ಸಾಧಾರಣ ವ್ಯಕ್ತಿಗಳಿಗೆ ಕೈಯಿಗಳಿಂದ ನಮಸ್ಕರಿಸುವುದು, ಅಸಾಧಾರಣ ವ್ಯಕ್ತಿಗಳಾದ ಸ್ವಾಮಿಜೀಗಳಿಗು ಗುರುಗಳಿಗು ಪಾದಾಭಿವಂದನೆಗಳು ಮಾಡುವುದು ಹಿಂದೂಗಳಲ್ಲಿ ಪರಿಪಾಟಿಯಾಗಿದೆ. ಈ ವಿಧಾನ ಪೂರ್ವಕಾಲದಿಂದ ಬರುತ್ತಿರುವ ವಿಷಯವೇ. ಈ ವಿಧಾನಕಾರ್ಯ ಪೂರ್ವದಲ್ಲಿರುವುದೇ ಆದರೂ ಕಾರ್ಯದಲ್ಲಿನ ಭಾವನೆ ತಲೆಕೆಳಗಾಗಿ ಹೋಗಿದೆಯೆಂದು ಹೇಳಬಹುದು. ಎಷ್ಟೋ ಆಚರಣೆಗಳಿಗೆ ಅರ್ಥ ತಿಳಿಯದೇ ಕಾಲಗರ್ಭದಲ್ಲಿ ಬೆರೆತುಹೋದಂತೆ ಹಿರಿಯರನ್ನು ಗೌರವಿಸುವುದರಲ್ಲಿಯೂ, ಅವರು ಆಶೀರ್ವಾದಿಸುವುದರಲ್ಲಿಯೂ ಅರ್ಥ ಬದಲಾಗಿಹೋಗಿದೆಯೆಂದು ಹೇಳಬಹುದು.

ಒಬ್ಬ ಮನುಷ್ಯ ಒಬ್ಬ ಸ್ವಾಮಿಗಾಗಲಿ ಗುರುಗಾಗಲಿ ಪಾದಾಭಿವಂದನೆ ಮಾಡಿದಾಗ ನಮಸ್ಕರಿಸಿದ ಮನುಷ್ಯನಿಗೆ ಒಳ್ಳೆಯದು ಮಾಡುವನಿಮಿತ್ತ ಹೇಳುವ ಮಾತನ್ನು ಆ ಸ್ವಾಮಿಜೀ ಕೊಟ್ಟ 'ಆಶೀರ್ವಾದ' ಅನ್ನುತ್ತೇವೆ. ಅದೇ ವಿಧವಾಗಿ ಕೆಟ್ಟದ್ದು ಮಾಡುವ ಸಲುವಾಗಿ ಹೇಳಲ್ಪಡುವ ಮಾತುಗಳನ್ನು ಬೈಗಳು ಎನ್ನುತ್ತೇವೆ. ಕೆಟ್ಟದ್ದು ನಡೆಯುವ ದೂಷಣೆಗಳಾಗಲಿ, ಒಳ್ಳೆಯದು ನಡೆಯುವ ಆಶೀರ್ವಾದವಾಗಲಿ **'ಶಾಪಗಳು'** ಎನ್ನುತ್ತೇವೆ. **ಶಾಪ ಎನ್ನುವ ಪದ ಶಾಸನ** ಎನ್ನುವ ಪದದಿಂದ ಹುಟ್ಟಿದೆ. ಶಾಸನ ಎಂದರೆ ತಪ್ಪದೇ ನಡೆಯುವುದೆಂದು ಅರ್ಥ. ಹಾಗೆಯೇ ಶಾಪ ಎಂದರೆ ತಪ್ಪದೇ ನಡೆಯುವುದೆಂದು ಅರ್ಥ. ಹೇಳುವ ವ್ಯಕ್ತಿ ದೊಡ್ಡವನಾದರೆ ಆ ಮಾತು ತಪ್ಪದೆ ನಡದೆನಡೆಯುತ್ತದೆ. ಕೆಟ್ಟ ದೂಷಣೆ ವಿಷಯಗಳಲ್ಲಿಯೇ ಶಾಪವಿರುತ್ತದೆ ಅಲ್ಲವೆ! ಒಳ್ಳೆಯ ಆಶೀರ್ವಾದ ವಿಷಯಗಳಲ್ಲಿ ಕೂಡ ಶಾಪವಿರುತ್ತದಾ! ಎಂದು ಕೆಲವರಿಗೆ ಅನುಮಾನ ಬರಬಹುದು. ಅದಕ್ಕೆ ಸಮಾಧಾನ ಏನೆಂದರೆ! ಒಳ್ಳೆಯದಾಗಲಿ ಕೆಟ್ಟದಾಗಲಿ ತಪ್ಪದೆ ನಡೆಯುವುದನ್ನು ಶಾಪ ಎಂದು ಕರೆಯುತ್ತೇವೆ ಆದರೆ ಒಂದು ಕೆಟ್ಟದು ನಡೆಯುವ ವಿಷಯಕ್ಕೇ ಶಾಪವನ್ನು ಅಂಟಗಟ್ಟಬಾರದು.

ಕರ್ಮವನ್ನು ತಲೆಕೆಳಗೆ ಮಾಡಬಲ್ಲ ಶಕ್ತಿ ಬ್ರಹ್ಮರ್ಷಿ ಪದವಿಯಲ್ಲಿರುವ ಒಬ್ಬನೇ ಒಬ್ಬ ಗುರುವಿಗೆ ಮಾತ್ರವಿರುತ್ತದೆ. ಅಂತಹ ಗುರುವೊಂದರ ಸಂಕಲ್ಪ ಒಳ್ಳೆಯದಾದರೆ ಆಶೀರ್ವಾದವಾಗಿಯು, ಕೆಟ್ಟದಾದರೆ ಕೇಡಾಗಿಯು ಬದಲಾಗುತ್ತದೆ. ಬ್ರಹ್ಮರ್ಷಿ ಪದವಿಯಲ್ಲಿರುವ ಆತನ ಸಂಕಲ್ಪ ತಪ್ಪದೆ ನಡದ 'ನಡೆಯುತ್ತದೆ, ಆದ್ದರಿಂದ ಅದನ್ನು ಶಾಪವೆಂದೇ ಹೇಳಬಹುದು. ಶಾಪ ಎರಡು ವಿಧಗಳೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಅದರಲ್ಲಿ **ಒಂದು ದೂಷಣೆ ಎರಡು ಭೂಷಣ. ದೂಷಣೆಗಳನ್ನು ಬೈಗಳೆಂದು, ಭೂಷಣಗಳನ್ನು ಆಶೀರ್ವಾದಗಳೆಂದು ಕೂಡ ಹೇಳಕೊಳ್ಳಬಹುದು**. ಬೈಗಳನ್ನು, ಆಶೀರ್ವಾದಗಳನ್ನು ಬಹಳ ಕಡೆ, ಬಹಳ ಸಂದರ್ಭಗಳಲ್ಲಿ ನೋಡುತ್ತಲೇ ಇದ್ದೇವೆ. ಆದರೆ ಮುಖ್ಯವಾಗಿ ಯಾರ ಮಾತುಗಳನ್ನು ಆಶೀರ್ವಾದಗಳಾಗಿ, ಬೈಗಳಾಗಿ ಲೆಕ್ಕಿಸಿಕೊಳ್ಳಬೇಕೊ, ಯಾವ ಮಾತುಗಳನ್ನು ಬೈಗಳಾಗಿ, ಯಾವ ಮಾತುಗಳನ್ನು ಆಶೀರ್ವಾದಗಳಾಗಿ ಭಾವಿಸಿಕೊಳ್ಳಬೇಕೊ ತಿಳಿಯದೆ ಮಾನವನು ಗೊಂದಲಪಡುತ್ತಿದ್ದಾನೆ. ಯಾರ ಮಾತುಗಳು ಶಾಪಗಳಾಗಿ ನಡೆಯುತ್ತವೊ ತಿಳಿಯದೆ, ಯಾರು ಕರ್ಮವನ್ನು ಬದಲಾಯಿಸುವ ಶಕ್ತಿ ಇರುವವರೊ ತಿಳಿಯದೆ ಬಹಳಜನರಿಗೆ ಪಾದಾಭಿವಂದನೆ ಮಾಡುವುದು ಮಾನವನಿಗೆ ಪರಿಪಾಟವಾಗಿದೆ. ವಂದನೆ ಮಾಡಿಸಿಕೊಳ್ಳುವವರು ನಾವು ಯಾವ ಮಟ್ಟದ ಮನುಷ್ಯರೆಂದು ಆಲೋಚಿಸದೆ, ತಾವು ಆಶೀರ್ವಾದಿಸುವು ಆರ್ಶೀವಾದಗಳು ನಡೆಯುತ್ತವಾ ಎಂದು ಯೋಚಿಸದೆ, ಕೈ ಮುಗಿದವರೆಲ್ಲರನ್ನು ಆಶೀರ್ವಾದಿಸುವುದು ನಡೆಯುತ್ತಿದೆ. ಒಳ್ಳೆಯದು ಮಾಡುವವರಿಗಿಂತ ಕೆಟ್ಟದು ಮಾಡುವವರು ಹೆಚ್ಚು ಆದ್ದರಿಂದ ಕೈ ಮುಗಿಯದಿದ್ದರೂ ಬೈಯ್ಯುವವರು ಹೆಜ್ಜೆಹೆಜ್ಜೆಗು ಇದ್ದಾರೆ.

ಬೈಗಳು ಅಥವಾ ದೂಷಣೆ ಎಂದರೆ ಕೆಟ್ಟದನ್ನು ಸೂಚಿಸುವುದೆಂದು, ಹಾಗೆ ಆಶೀರ್ವಾದ ಎಂದರೆ ಒಳ್ಳೆಯದನ್ನು ಸೂಚಿಸುವುದೆಂದು ತಿಳಿದು ಕೊಂಡಿದ್ದೇವೆ. ಒಳ್ಳೆಯದು ಕೆಟ್ಟದು ಪ್ರಾತಿಪಾದಿಸುವುದರ ಮೇಲೆ ಒಳ್ಳೆಯದನ್ನು ಆಶೀರ್ವಾದವಾಗಿ, ಕೆಟ್ಟದನ್ನು ದೂಷಣೆಯಾಗಿ (ಬೈಯುವುದಾಗಿ) ಲೆಕ್ಕಿಸಿ

ನೋಡಿದರೆ, ಒಳ್ಳೆಯವರು ಶ್ರೇಯಾಭಿಲಾಷಿಗಳಾಗಿ ಗುರುಗಳು ಒಳ್ಳೆಯದನ್ನು ಕೈಗೂಡಿಸಲು ಆಶೀರ್ವಾದವನ್ನು ಮಾಡುವುದು, ಕೆಟ್ಟವರು ಶತ್ರುಗಳಾದವರು ಕೆಟ್ಟದ್ದನ್ನು ಕೈಗೂಡಿಸಲು ಬೈಯ್ಯುವುದನ್ನು ಪದ್ಧತಿ ಎಂದುಕೊಳ್ಳೋಣ. ಈ ಪದ್ಧತಿ ಪೂರ್ವದಲ್ಲಿತ್ತು. ಪ್ರಸ್ಥುತ ಕಾಲದಲ್ಲಿ ಪೂರ್ವದ ಪದ್ಧತಿಗೆ ಪೂರ್ತಿ ವಿಭಿನ್ನವಾಗಿ ಇದೆಯೆಂದೇ ಹೇಳಬಹುದು. ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತವೆನ್ನುವುದಕ್ಕೆ ಇದು ಕೂಡ ಒಂದು ಉದಾಹರಣೆ ಆಗಬಹುದೆಂದು ಕೊಳ್ಳುತ್ತೇವೆ.

ಗುರುಗಳಾಗಿ ಸ್ವಾಮಿಗಳಾಗಿ ಇರುವವರು ತಮಗೆ ಪಾದಾಭಿವಂದನೆ ಮಾಡಿದವರಿಗೆ ಕೆಟ್ಟದಾಗುವಂತೆ ಶತ್ರುಗಳಂತೆ ದೂಷಣೆಕೊಡುವುದು, ಶತ್ರುಗಳಾದವರಿಗೆ ಮಿತ್ರಗಳಂತೆ ಶ್ರೇಯೋಭಿಲಾಷಿಗಳಂತೆ ಆಶೀರ್ವಾದ ಮಾಡುವುದು ನಡೆಯುತ್ತಿದೆಯೆಂದರೆ ಯಾರಿಗಾದರೂ ವಿಚಿತ್ರವೆನಿಸುತ್ತದೆ ಅಲ್ಲವೆ! ಆ ವಿಚಿತ್ರವೇ ಈದಿನ ಭೂಮಿ ಮೇಲೆ ನಮಗೆ ತಿಳಿಯದಂತೆ ನಡೆಯುತ್ತಿದೆ. **ಸ್ವಾಮಿಗಳು ದೂಷಿಸುತ್ತಿದ್ದಾರೆ, ಶತ್ರುಗಳು ಆಶೀರ್ವಾದಿಸುತ್ತಿದ್ದಾರೆ.** ಬೈಗಳಾವುವೊ ಆಶೀರ್ವಾದಗಳ್ಯಾವೊ ತಿಳಿಯದಿರುವುದೇ ಇದಕ್ಕೆ ಕಾರಣವೆಂದು ಹೇಳಬಹುದು. ಬೈಗಳ ಆಶೀರ್ವಾದಗಳ ತಾರತಮ್ಯ ಯಾರಿಗೂ ತಿಳಿಯದಿರುವುದರಿಂದ ಸ್ವಾಮಿಗಳು ಬೈಗಳನ್ನು, ಶತ್ರುಗಳು ಆಶೀರ್ವಾದಗಳನ್ನು ಕೊಡುತ್ತಿದ್ದಾರೆ. ಈ ವಕ್ರಪದ್ಧತಿ ಇಲ್ಲದಂತೆ ಹೋಗಬೇಕೆಂದರೆ ಬೈಗಳನ್ನು ಕುರಿತು, ಆಶೀರ್ವಾದಗಳನ್ನು ಕುರಿತು ವಿಶಧವಾಗಿ ತಿಳಿಯಬೇಕಾದ ಅವಶ್ಯಕತೆ ಇದೆ. ದೂಷಣೆ, ಭೂಷಣೆ ವಿವರವನ್ನು ತಿಳಿಸುವುದಕ್ಕೆ, ಬೈಗಳಲ್ಲಿರುವ ಜ್ಞಾನವನ್ನು ಆಶೀರ್ವಾದಗಳಲ್ಲಿರುವ ಅಜ್ಞಾನವನ್ನು ತಿಳಿಸುವುದಕ್ಕೆ **"ಬೈಗಳ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ"** ಎನ್ನುವ ಈ ಚಿಕ್ಕ ಗ್ರಂಥವನ್ನು ಬರೆಯುವುದು ನಡೆದಿದೆ.

ಇಂದಿನ ಬೈಗಳಲ್ಲಿ ಜ್ಞಾನವಿದೆಯೆಂದರೂ, ಆಶೀರ್ವಾದಗಳಲ್ಲಿ ಅಜ್ಞಾನ ಇದೆಯೆಂದರು ಇದೇನು ವಿಡ್ಡೂರವೆಂದು ಕೆಲವರಂದುಕೊಳ್ಳಬಹುದು. ಪೂರ್ವದಲ್ಲಿ ಜ್ಞಾನಸಂಬಂಧವಾದ ಆಶೀರ್ವಾದಗಳು ಈದಿನ ಬೈಗಳಾಗಿ ಬದಲಾಗಿವೆ. ಹಾಗೆಯೇ ಪೂರ್ವದಲ್ಲಿ ಅಜ್ಞಾನ ಸಂಬಂಧವಾದ ದೂಷಣೆಗಳು

ಈದಿನ ಆಶೀರ್ವಾದಗಳಾಗಿ ಬದಲಾಗಿವೆ. ಆದ್ದರಿಂದ ಇಂದಿನ ಬೈಗಳಲ್ಲಿರುವ ಸದುದ್ದೇಶವೇನೊ ಹಾಗೆಯೇ ಆಶೀರ್ವಾದಗಳಲ್ಲಿರುವ ದುರುದ್ದೇಶವೇನೊ ವಿವರಿಸಿಕೊಂಡು ನೋಡೋಣ.

# ನೀನು ನಾಶವಾಗಿ ಹೋಗು

ಯಾರಾದರೂ ಹೆಂಗಸರು ಮಾತನಾಡಿಕೊಳ್ಳುವಾಗ **"ನೀನು ನಾಶನ ವಾಗಿ ಹೋಗಲಿ"** ಎಂದು ಎದುರಿಗಿರುವವರನ್ನು ಬೈಯ್ಯುವುದು ಅಲ್ಲಲ್ಲಿ ಕೇಳಿಯೇ ಇರುತ್ತೇವೆ. ಇಂದು ಈ ವಾಕ್ಯ ಶತ್ರುವನ್ನು ದೂಷಿಸುವಾಗ ಅನ್ನುವುದಕ್ಕೆ ಬೈಗಳಂತೆ ಉಪಯೋಗಿಸುತ್ತಿದ್ದರೂ ಇದು ಪೂರ್ವಕಾಲದ ಬೈಗಳಂತಲ್ಲದೆ ಆಶೀರ್ವಾದವಾಗಿ ಇತ್ತು. ಪೂರ್ವದಲ್ಲಿ ಈ ವಾಕ್ಯ ಆಶೀರ್ವಾದವಾಗಿ ಹೇಗಿರುತ್ತಿತ್ತೊ ವಿಶಧೀಕರಿಸಿಕೊಳ್ಳೋಣ.

ಪೂರ್ವದಲ್ಲಿ ಅವಿನಾಶ ಎನ್ನುವ ಒಬ್ಬ ಶಿಷ್ಯನು ಗುರುವಿನ ಹತ್ತಿರ ಜ್ಞಾನ ತಿಳಿದುಕೊಳ್ಳುತ್ತಿದ್ದನು. ಒಂದು ದಿನ ಸಾಯಂಕಾಲ ಪ್ರಕ್ಕದಲ್ಲಿಯೇ ಇರುವ ನದಿತೀರದಲ್ಲಿ ಮರಳಿನ ದಿನ್ನೆಮೇಲೆ ಗುರು ಕುಳಿತುಕೊಂಡಿರುವಾಗ ಆತನ ಮುಂದೆ ಕೆಲವರು ಶಿಷ್ಯರು ಕುಳಿತುಕೊಂಡಿದ್ದರು. ಅದರಲ್ಲಿ ಅವಿನಾಶ್ ಎನ್ನುವ ಶಿಷ್ಯನು ಕೂಡ ಕುಳಿತುಕೊಂಡಿದ್ದನು. ಅವಿನಾಶ್ ಹೊಸದಾಗಿ ಬಂದಿರುವ ಶಿಷ್ಯನಾದ್ದರಿಂದ ಉಳಿದ ಶಿಷ್ಯರಿಗೆ ಕೂಡ ಆತನ ಹೆಸರು ತಿಳಿಯುವಂತೆ ನಿನ್ನ ಹೆಸರೇನು? ಎಂದು ಅವಿನಾಶನನ್ನು ಗುರುಗಳು ಕೇಳಿದ್ದಾರೆ. ಆಗ ಆತನು ನನ್ನ ಹೆಸರು ಅವಿನಾಶ್ ಎಂದು ತಿಳಿಸಿದ್ದಾನೆ. ಆ ಹೆಸರು ಕೇಳಿ ಮುಗುಳ್ನಕ್ಕ ಗುರು ಈ ಹೆಸರಿನಲ್ಲಿನ ಅರ್ಥ ತಿಳಿದಿದೆಯಾ? ಎಂದು ಉಳಿದವರನ್ನು ಕೇಳಿದ್ದಾನೆ. ಆಗ ಅವರಲ್ಲಿ ಕೆಲವರು ತಿಳಿದಿದೆಯೆಂದು, ಅವಿನಾಶ್ ಎಂದರೆ ನಾಶನ ಇಲ್ಲದವನೆಂದು ಅರ್ಥ ಹೇಳಿದ್ದಾರೆ. ನಂತರ ಗುರುಶಿಷ್ಯರ ಮಧ್ಯ ಸ್ವಲ್ಪ ಸಮಯ ಸಂವಾದ ನಡೆದಿದೆ. ಆ ಸಂಭಾಷಣೆಯಲ್ಲಿ ಮೊದಲು ಗುರುವು ಹೀಗೆ ಕೇಳಿದ್ದಾನೆ.

**ಗುರು :** ಈ ಹೆಸರು ಈತನು ಹುಟ್ಟಿದ ನಂತರ ಇಟ್ಟಿರುವುದಾ ಅಥವಾ ಮೊದಲಿನಿಂದ ಇರುವುದಾ?

**ಶಿಷ್ಯರು :** ಈ ಹೆಸರು ಹುಟ್ಟಿದ ನಂತರ ಇಟ್ಟಿರುವುದೇ ಸ್ವಾಮಿ?

**ಗುರು ;** ಹುಟ್ಟಿದ ನಂತರ ಕೂಡಲೇ ಇಡಲಿಲ್ಲ ಅಲ್ಲವೆ! ಹುಟ್ಟಿದ ಕೆಲವು ದಿನಗಳ ನಂತರ ಇಟ್ಟಿರುವ ಹೆಸರು ಅಲ್ಲವೆ!

**ಶಿಷ್ಯರು** : ಹೌದು ಸ್ವಾಮಿ!

**ಗುರು ;** ಹೆಸರು ಇಡುವುದಕ್ಕಿಂತ ಮೊದಲು ಈತನ ಹೆಸರನ್ನು ಏನೆಂದು ಹೇಳಬೇಕು?

**ಶಿಷ್ಯರು** ; ಮೊದಲು ಜೀವಿಯೆಂದು ನಂತರ ಅವಿನಾಶ್ ಎಂದು ಹೇಳಬೇಕು.

**ಗುರು** : ಅವಿನಾಶ್ ಎನ್ನುವುದು ಶರೀರಕ್ಕೆ ಇಟ್ಟಿರುವ ಹೆಸರೇ ಅಲ್ಲವೆ! ಜೀವಿಗೆ ಸರಿಹೋಗುತ್ತದಾ?

**ಶಿಷ್ಯರು** : ಶರೀರಕ್ಕೆ ಸರಿಹೋಗುವುದಿಲ್ಲ ಸ್ವಾಮಿ! ಜೀವಾತ್ಮಕ್ಕೆ ಸರಿಹೋಗುತ್ತದೆ.

**ಗುರು :** ಶರೀರಕ್ಕೆ ಏಕೆ ಸರಿಹೋಗುವುದಿಲ್ಲ?

**ಶಿಷ್ಯನು :** ಶರೀರ ಸ್ವಲ್ಪಕಾಲವಿದ್ದು ನಶಿಸಿ ಹೋಗುವುದೇ ಅಲ್ಲವೆ! ನಶಿಸಿ ಹೋಗುವುದು ಶರೀರ. ಶರೀರ ನಶಿಸಿದರೂ ನಶಿಸದಿರುವುದು ಜೀವಿ, ಆದ್ದರಿಂದ ಜೀವಿಗೆ ಅವಿನಾಶ್ ಎನ್ನುವ ಹೆಸರು ಸರಿಹೋಗುತ್ತದೆ. ಆದರೆ ಶರೀರಕ್ಕೆ ಆ ಹೆಸರು ಸರಿಹೋಗುವುದಿಲ್ಲ.

**ಗುರುವು:** ಭಗವದ್ಗೀತೆಯಲ್ಲಿ ಜೀವಾತ್ಮ ನಶಿಸುವವನೇ ಎಂದು ಹೇಳಿದ್ದಾರೆ. ಹಾಗಿರುವಾಗ ಆ ಹೆಸರು ಜೀವಾತ್ಮಕ್ಕೆ ಕೂಡ ಸರಿಹೋಗುವುದಿಲ್ಲ. ಜೀವಿಯು ಕೂಡ ನಶಿಸುವವನೇ. ಶರೀರ ಮರಣದಿಂದ ನಶಿಸುತ್ತಿದೆ. ಮರಣದಲ್ಲಿ ಜೀವಿಯು ನಾಶವಾಗುವುದಿಲ್ಲ ಎನ್ನುವ ಮಾತು ವಾಸ್ತವವೇ. ಮರಣಿಸಿದ ನಂತರ ಜೀವಿಯು ಮತ್ತೊಂದು ಶರೀರವನ್ನು ಧರಿಸಿ ಸಜೀವವಾಗಿಯೇ ಇರುತ್ತಾನೆ **ಆಯಸ್ಸು ಮುಗಿದುಹೋದರೆ ಶರೀರವು ನಶಿಸುತ್ತದೆ. ಕರ್ಮ ಮುಗಿದುಹೋದರೆ ಜೀವಿಯು ನಶಿಸುತ್ತದೆನ್ನುವುದು ಸೂತ್ರ.** ಕರ್ಮ ಮುಗಿದುಹೋದಾಗ ಜೀವಿಗೆ ನಾಶ

ತಪ್ಪುವುದಿಲ್ಲ, ಆದ್ದರಿಂದ ಅವಿನಾಶ್ ಎನ್ನುವ ಹೆಸರು ಅರ್ಥದ ಪ್ರಕಾರ ಜೀವಿಗೆ ಕೂಡ ಅನ್ವಯಿಸುವುದಿಲ್ಲ.

ಈ ವಿಧವಾಗಿ ಗುರುವಿನ ಹತ್ತಿರ ಆತ್ಮಜ್ಞಾನವನ್ನು ತಿಳಿದುಕೊಳ್ಳುತ್ತಿರುವ ಶಿಷ್ಯರು ಕೆಲವು ವರ್ಷಗಳಿಗೆ ಪರಿಪೂರ್ಣ ಜ್ಞಾನಿಗಳಾಗಿ ಗುರುಸೇವ ಸಕ್ರಮವಾಗಿ ಮಾಡುತ್ತಿರುತ್ತಾರೆ. ಶಿಷ್ಯರು ಜ್ಞಾನದಲ್ಲಿ ಆಸಕ್ತಿ ಹೊಂದಿದ್ದು ಜ್ಞಾನವನ್ನು ತಿಳಿದುಕೊಳ್ಳುವುದು ಮತ್ತು ಅವರು ಶ್ರದ್ಧೆಯಿಂದ ಸೇವೆಗಳು ಮಾಡುವುದನ್ನು ಗಮನಿಸಿದ ಗುರು ಸಂತೋಷಿಸುತ್ತಿದ್ದನು. ಹೀಗೆ ಸ್ವಲ್ಪ ಕಾಲ ಕಳೆದಾಗ ಒಂದುದಿನ ಅವಿನಾಶ್ ಎನ್ನುವ ಶಿಷ್ಯನು ಭಕ್ತಿ ಶ್ರದ್ಧೆಗಳಿಂದ ಗುರು ಪಾದಗಳಿಗೆ ನಮಸ್ಕರಿಸುವ ಸಮಯದಲ್ಲಿ ಗುರುಗಳು ಒಂದು ಆಶೀರ್ವಾದವನ್ನು ತನ್ನ ಬಾಯಿಂದ ಹೇಳಿದನು. ಆ ಆಶೀರ್ವಾದವನ್ನು ಕೇಳಿದ ಉಳಿದ ಶಿಷ್ಯರೆಲ್ಲರೂ ಆಶ್ಚರ್ಯಹೋಗಿದ್ದಾರೆ. ಆ ಸಮಯದಲ್ಲಿ ತಮಗೆ ಉಂಟಾದ ಆ ಆಶ್ಚರ್ಯ ವಿಷಯವನ್ನು ಕುರಿತು ಗುರುಗಳನ್ನು ಕೇಳಲಿಲ್ಲ. ತಮ್ಮಲ್ಲಿ ತಾವು ಆ ವಿಷಯವನ್ನು ಕೆಲವು ದಿನಗಳು ಚರ್ಚಿಸಿಕೊಂಡಿದ್ದಾರೆ. ಕೊನೆಗೆ ಗುರುಗಳು ಕೊಟ್ಟಿರುವ ಆಶೀರ್ವಾದ ತಪ್ಪೆಂದು ತಿಳಿದು, ಆ ಸಂಶಯವನ್ನು ಗುರುಗಳೇ ತೀರಿಸಬೇಕೆಂದು ಈ ವಿಧವಾಗಿ ಕೇಳಿದರು.

**ಶಿಷ್ಯರು :** ಸ್ವಾಮಿ! ನಮಗೊಂದು ಸಂಶಯ ಬಹಳ ದಿನಗಳಿಂದ ಪೀಡಿಸುತ್ತಿದೆ. ಆ ಸಂಶಯಕ್ಕೆ ನೀವೇ ಉತ್ತರ ಹೇಳಬಲ್ಲಿರೆಂದು ವಿನಯವಾಗಿ ಕೇಳುತ್ತಿದ್ದೇವೆ.

**ಗುರು :** ನೀವು ಜ್ಞಾನಕ್ಕೆ ಅರ್ಥವಾಗದ ಸಂಶಯವೇನು?

**ಶಿಷ್ಯರು :** ಅವಿನಾಶ್‌ಗೆ ನೀವು ಮಾಡಿರುವ ಆಶೀರ್ವಾದವೇ ನಮಗೆ ಅರ್ಥವಾಗಲಿಲ್ಲ ಸ್ವಾಮಿ.

**ಗುರು :** ಅದರಲ್ಲಿ ಅರ್ಥವಾಗದಿರುವುದು ಏನಿದೆ?

**ಶಿಷ್ಯರು :** ನೀವು ಅವಿನಾಶ್‌ನನ್ನು ಆಶೀರ್ವದಿಸುತ್ತಾ **"ನೀನೀ ನಾಶನವಾಗಿ ಹೋಗಲಿ"** ಎಂದಿದ್ದಾರ. ಮರಣದಿಂದ ಜೀವಿಯು ನಾಶನವಾಗುವುದಿಲ್ಲ.

ಕರ್ಮ ಮುಗಿದಾಗಲೇ ನಾಶನವಾಗುತ್ತಾನೆಂದು ಹೇಳಿದ್ದೀರ. ಕರ್ಮಅನುಭವಿಸದೇ ಹೋಗುವುದಿಲ್ಲ ಅಥವಾ ಯೋಗ ಮಾಡದೇ ಹೋಗುವುದಿಲ್ಲ. ಹಾಗಿರುವಾಗ ನಿಮ್ಮ ಮಾತು ನಡೆಯುತ್ತದಾ ಎನ್ನುವುದೇ ಸಂಶಯ.

**ಗುರು :** ಕರ್ಮ ವಿಷಯದಲ್ಲಿ ನೀವು ಹೇಳಿದ ಪದ್ಧತಿ ಸರಿಯಾದುದೇ. ಆದರೆ ಮತ್ತೊಂದು ಪದ್ಧತಿ ಕೂಡ ಇದೆ. ಜ್ಞಾನಾಗ್ನಿ ಅಮಿತವಾಗಿರುವವರು ಅವರ ಸಂಕಲ್ಪದಿಂದ ಮತ್ತೊಬ್ಬನ ಕರ್ಮವನ್ನು ಸುಡಬಹುದು. ಆ ವಿಧವಾಗಿ ಸಂಪೂರ್ಣ ಯೋಗಿಗಳಾಗಿ ಬ್ರಹ್ಮರ್ಷಿ ಸ್ಥಾನ ಹೊಂದಿದವರು ಮಾತ್ರ ಮಾಡಬಲ್ಲರು. ಕರ್ಮ ಇಲ್ಲದಂತೆ ಹೋದರೆ ಜೀವಿಯು ನಶಿಸಿ ಪರಮಾತ್ಮನಾಗಿ ಬದಲಾಗುತ್ತಾನೆ. ಅವಿನಾಶ್‌ನನ್ನು ನಾನು ಆಶೀರ್ವದಿಸುವುದರಲ್ಲಿ ಅದೇ ಅಂತರಾರ್ಥ ಇದೆ. ಅವಿನಾಶ್ ಎಂದರೆ ನಾಶವಿಲ್ಲದವನೆಂದು ಅರ್ಥ ಅಲ್ಲವೆ! ಆ ಹೆಸರು ಸಾರ್ಥಕವಾಗುವಂತೆ ಆತನು ಜೀವಾತ್ಮನಾಗಲ್ಲದೆ ನಾಶವಿಲ್ಲದ ದೇವರಾಗಿ ಬದಲಾಗಿಹೋಗಬೇಕೆಂದು, ಜೀವಾತ್ಮನಾದ ನೀನು ನಶಿಸಿ ಹೋಗಬೇಕೆಂದು ಆಶೀರ್ವಾದಿಸಿದ್ದೇನೆ.

**ಶಿಷ್ಯರು :** ನೀವು ಆಶೀರ್ವಾದಿಸಿದ ನಂತರ ಕೂಡ ಅವಿನಾಶ್ ಮೋಕ್ಷ ಹೊಂದದೆ ದೈವತ್ವದಲ್ಲಿ ಬೆರೆತುಹೋಗದೆ ನಮ್ಮೊಂದಿಗೆ ಸಮಾನವಾಗಿ ಜೀವಿಸುತ್ತಿದ್ದಾನೆ ಅಲ್ಲವೆ! ಆಶೀರ್ವಾದಲ್ಲಿನ ಅರ್ಥ ಜೀವಾತ್ಮ ನಶಿಸಿ ದೇವರು ಆಗಬೇಕೆಂದೇ ಅಲ್ಲವೆ! ಅದು ಇಲ್ಲಿಯವರೆಗು ನಡೆಯಲಿಲ್ಲ ಅಲ್ಲವೆ!

**ಗುರು :** ಈಗ ತಕ್ಷಣವೇ ನಡೆಯಲಿಲ್ಲವೆನ್ನುವ ಮಾತು ವಾಸ್ತವವೇ! ಹಿರಿಯರ ಆಶೀರ್ವಾದ ತಕ್ಷಣ ಏಕೆ ನಡೆಯಲಿಲ್ಲ? ಯಾವಾಗ ನಡೆಯುತ್ತದೆ? ಎನ್ನುವ ಪ್ರಶ್ನೆಗಳಿಗೆ ಉತ್ತರಗಳು ತಿಳಿಯಬೇಕೆಂದರೆ ಆಶೀರ್ವಾಗಳನ್ನು ಕುರಿತು ಪೂರ್ತಿ ವಿವರವಾಗಿ ತಿಳಿಯಬೇಕು. ಅದರ ವಿಷಯವನ್ನೇ ಈಗ ಸವಿವರವಾಗಿ ತಿಳಿಸುತ್ತೇನೆ ಕೇಳಿರಿ. ಆಶೀರ್ವಾದವನ್ನು ಯಾರಾದರೂ ಮಾಡಬಹುದು. ಆದರೆ ನೆರವೇರುವುದು ಒಬ್ಬ ಬ್ರಹ್ಮರ್ಷಿಗಳಾದವರ ಆಶೀರ್ವಾ ಮಾತ್ರವೇಯೆಂದು ತಿಳಿಯಬೇಕು. ಬ್ರಹ್ಮರ್ಷಿಗಳು ಆಶೀರ್ವಾದಿಸಿದ ಆ ಆಶೀರ್ವಾದ ಪ್ರಾರಬ್ಧಕರ್ಮ

ದಮೇಲೆ ಮಾತ್ರ ಕೆಲಸಮಾಡಲಿಲ್ಲವೆಂದು ತಿಳಿಯಬೇಕು. ಪ್ರಾರಬ್ಧ ಜನ್ಮದಿಂದ ಪ್ರಾರಂಭವಾಗಿ ಮರಣಿದಿಂದ ಮುಗಿದುಹೋಗುತ್ತದೆ. ಆದುದರಿಂದ ಯಾವ ಆಶೀರ್ವಾದವಾದರೂ ಆ ಜನ್ಮ ಮುಗಿದುಹೋದ ನಂತರವೇ ಕೆಲಸಮಾಡುತ್ತದೆ. **ಸರ್ವಾಧಿಕಾರಿಯಾದ ಭಗವಂತನ ಶರೀರದಿಂದ ಬರುವ ಪರಮಾತ್ಮ ಆಶೀರ್ವಾದ ಹೊರತು, ಇತರರು ಎಂತವರಾದರೂ ಕೊಡುವ ಆಶೀರ್ವಾದ ನಂತರ ಜನ್ಮದಲ್ಲಿ ನಡೆಯಬೇಕಾಗಿದ್ದೆ.** ಆದ್ದರಿಂದ ಈಗ ನಾನುಕೊಟ್ಟಿರುವ ಮಾತಿನ ಪ್ರಕಾರ ಅವಿನಾಶ್ ನಂತರ ಜನ್ಮದಲ್ಲಿ ಮೋಕ್ಷ ಹೊಂದುವುದಕ್ಕೆ ತಕ್ಕ ಜ್ಞಾಪಕಶಕ್ತಿ ಹೊಂದಿ ನನ್ನ ಆಶೀರ್ವಾದ ನೇರವೇರುತ್ತದೆ. ಈ ಪದ್ಧತಿ ತಿಳಿದು ಪೂರ್ವದಲ್ಲಿ ಆಶೀರ್ವದಿಸುತ್ತಿದ್ದರು. ಈಗ ತಿಳಿಯದರಿಂದಲೇ ನೀವು ಪ್ರಶ್ನಿಸಿದ್ದೀರ. ಇನ್ನೂ ತಿಳಿಯದವರು ಮತ್ತು ಸ್ಥೂಲ ಶರೀರವನ್ನೇ ತಾವೆಂದುಕೊಳ್ಳುವವರು ಆಶೀರ್ವಾದದಲ್ಲಿನ ಅರ್ಥವನ್ನು ಸ್ಥೂಲಕ್ಕೆ ಅನ್ವಯಿಸಿಕೊಂಡು **"ನೀನು ನಾಶನವಾಗಿ ಹೋಗಲಿ"** ಎನ್ನುವ ಆಶೀರ್ವಾದವನ್ನು ಬೈಗಳಾಗಿ ಭಾವಿಸಿಕೊಂಡು **"ನಾನು ಮರಣಿಸಬೇಕೆಂದು ದೂಷಿಸುತ್ತಿದ್ದೀಯಾ!"** ಎನ್ನುತ್ತಿದ್ದಾರೆ. ಸ್ಥೂಲ ಸೂಕ್ಷ್ಮಗಳ ವಿವರ ತಿಳಿದಯದಿರುವಾಗ, ಆತ್ಮಗಳ ವಿವರ ತಿಳಿಯದಿರುವಾಗ, ಜ್ಞಾನ ಸಮುಪಾರ್ಜನೆ ಇಲ್ಲದಿರುವಾಗ ಆಶೀರ್ವಾದಗಳು ಬೈಗಳಾಗಿ ಬೈಗಳು ಆಶೀರ್ವಾದಗಳಾಗಿ ಅರ್ಥವಾಗುತ್ತವೆ. ಆದುದರಿಂದ **"ನೀನು ನಾಶನವಾಗಿ ಹೋಗಲಿ"** ಎನ್ನುವ ಆಶೀರ್ವಾ ಇಂದಿನ ಕಾಲಕ್ಕೆ ದೂಷಣೆಯಾಗಿ ಬದಲಾಗಿದೆ.

# ದೀರ್ಘಾಯುಷ್ಮಾನ್ ಭವ

**"ದೀರ್ಘಾಯುಷ್ಮಾನ್ ಭವ"** ಎನ್ನುವ ದೂಷಣೆ ಆಶೀರ್ವಾದವಾಗಿ ಬದಲಾಗಿದೆ. **"ದೀರ್ಘಾಯುಷ್ಮಾನ್ ಭವ"** ಎಂದರೆ ನೀನು ಬಹಳಕಾಲ ಬದುಕೆಂದು ಅಥವಾ ನಿನಗೆ ಬಹಳ ಆಯುಸ್ಸು ಉಂಟಾಗಲೆಂದು ಆಶೀರ್ವಾದಿಸುವುದು ಅಲ್ಲವೆ! ಇದರಲ್ಲಿ ಕೆಟ್ಟದು ಏನಿದೆ? ಈಗಿದು ಆಶೀರ್ವಾದವಾಗಿಯೇ ಕಾಣಿಸುತ್ತದೆ ಅಲ್ಲವೆ! ಪೂರ್ವದಲ್ಲಿ ದೂಷಣೆಯಾಗಿ

ಹೇಗಿರುತ್ತಿತ್ತೆಂದು ಕೆಲವರಿಗೆ ಅನುಮಾನ ಬರಬಹುದು. **"ದೀರ್ಘಾಯುಷ್ಮಾನ್ ಭವ"** ಎನ್ನುವ ಮಾತು ಪೂರ್ವದಲ್ಲಿ ಹಿರಿಯರ ದೃಷ್ಠಿಯಲ್ಲಿ ಹೇಗೆ ದೂಷಣೆಯಾಗಿ ಇರುತ್ತಿತ್ತೋ ವಿವರಿಸಿಕೊಂಡು ನೋಡೋಣ.

ಪೂರ್ವದಲ್ಲಿ ಒಬ್ಬ ಗುರು ಎಷ್ಟೋ ಕಷ್ಟಪಟ್ಟು ಜ್ಞಾನಬೋಧ ಸಾಗಿಸುತ್ತಿದ್ದನು. ಗುರು ಧನಿಕನು ಅಲ್ಲದಿರುವುದರಿಂದ ಇತರರ ಹತ್ತಿರ ಧನವನ್ನು ಬಡ್ಡಿಗೆ ಸಾಲವಾಗಿ ತೆಗೆದುಕೊಂಡು ಅದನ್ನು ವಿನಿಯೋಗಿಸಿ ಜ್ಞಾನಪ್ರಚಾರ ಮಾಡುತ್ತಿದ್ದನು. ಆ ಗುರುವು ಹತ್ತಿರ 'ಲೆಕ್ಕಾಚಾರಿ' ಎನ್ನುವ ಒಬ್ಬ ಭಕ್ತನು ಸೇರಿದ್ದಾನೆ. ಆತನು ವ್ಯಾಪಾರ ಮಾಡಿ ಹಣ ಸಂಪಾದಿಸುವುದೇ ಅಲ್ಲದೆ ಸಂಪಾದಿಸಿದ ಸ್ವತ್ತನ್ನು ಬಡ್ಡಿಗೆ ಸಾಲಕೊಟ್ಟು ಕೂಡ ಸಂಪಾದಿಸುವುದು ಆತನ ಕೆಲಸ. ಗುರುಗಳಿಗೆ ಹಣ ಅಗತ್ಯ ಅಲ್ಲವೆ! ಆತನಿಗೆ ಸಾಲವಾಗಿ ಹಣಕೊಟ್ಟರೆ ಜ್ಞಾನ ವಿಷಯದಲ್ಲಿ ಸಹಾಯವಾದಂತೆ ಇರುತ್ತದೆ, ಸುಲಭವಾಗಿ ಬಡ್ಡಿ ಕೂಡ ಬರುತ್ತದೆ. ಎರಡು ವಿಧಗಳಾಗಿ ಲಾಭವೇ ಇರುತ್ತದೆಂದುಕೊಂಡಿದ್ದಾನೆ. ವ್ಯಾಪಾರಸ್ತನು ಆದ್ದರಿಂದ ಜ್ಞಾನ ಹತ್ತಿರ ಕೂಡ ವ್ಯಾಪಾರದೃಷ್ಠಿಯೇ ಇರುತ್ತಿತ್ತು. ಗುರುಗಳು ಜ್ಞಾನ ಪ್ರಚಾರ ನಿಮಿತ್ತ ಇಪ್ಪತ್ತುಜನ ಶಿಷ್ಯರೊಂದಿಗೆ ಸಹ ಪರ್ಯಟನೆ ಮಾಡಬೇಕೆಂದುಕೊಂಡಿದ್ದಾನೆ. ಆ ಪರ್ಯಟನೆಗೆ ಒಂದು ಲಕ್ಷರೂಪಾಯಿಗಳು ಅಗತ್ಯವಾಗಿವೆ. ಗುರುಗಳು ಆ ಲಕ್ಷರೂಪಾಯಿಗಳು ಸಾಲ ಮಾಡಿ ನಂತರ ತೀರಿಸೋಣ ಎಂದುಕೊಂಡಿದ್ದಾನೆ. ವಿಷಯ ತಿಳಿದ ಲೆಕ್ಕಾಚಾರಿ ನನ್ನ ಸ್ನೇಹಿತನ ಹತ್ತಿರ ಹಣವಿದೆ, ಆತನನ್ನು ಕೇಳಿ ನೂರಕ್ಕೆ ಎರಡು ರೂಪಾಯಿಗಳ ಬಡ್ಡಿ ಪ್ರಕಾರ ಲಕ್ಷರೂಪಾಯಿಗಳು ಸಾಲ ತರುತ್ತೇನೆಂದಿದ್ದಾನೆ. ಹಾಗೆ ಆಗಲಿಯೆಂದು ಗುರುಗಳು ಪ್ರಾಮಿಸರಿನೋಟು ಕೂಡ ಬರೆದುಕೊಟ್ಟಿದ್ದಾನೆ. ನೋಟು ಕೂಡ ಸ್ನೇಹಿತನ ಹೆಸರಿನಮೇಲೆಯೇ ಬರೆಸಿಕೊಂಡಿದ್ದಾನೆ ಲೆಕ್ಕಾಚಾರಿ.

ಗುರುಗಳು ಆರುತಿಂಗಳು ಕಾಲ ತನ್ನ ಜ್ಞಾನಪ್ರಚಾರ ಸಾಗಿಸಿ ಇರುವ ಹಣವೆಲ್ಲ ಖರ್ಚಾದ ನಂತರ ಮನೆಗೆ ಬಂದಿದ್ದಾನೆ. ಮನೆಗೆ ಬಂದ ನಂತರ ತನ್ನ ಹೊಲದ ಕೆಲಸಗಳ ಮೇಲೆ ದೃಷ್ಠಿ ಹರಿಸಿದ್ದಾನೆ. ಒಂದು ದಿನ ಗುರುಗಳ

ಹತ್ತಿರಕ್ಕೆ ಲೆಕ್ಕಾಚಾರಿ ಬಂದು ಆರುತಿಂಗಳಿಗೊಂದು ಸಲ ಬಡ್ಡಿಕಟ್ಟುವಂತೆ ಒಪ್ಪಿಕೊಂಡಿದ್ದೇನೆಂದು, ಅದರಪ್ರಕಾರ ಆರುತಿಂಗಳು ಕಳೆದಿದೆ ಆದ್ದರಿಂದ ಈಗ ಆತನಿಗೆ ಬಡ್ಡಿ ಕಟ್ಟಬೇಕೆಂದು ಹೇಳಿದ್ದಾನೆ. ಪ್ರಪಂದ ವಿಷಯಗಳಲ್ಲಿ ಹೆಚ್ಚಾಗಿ ಜೋಕ್ಯವಿಲ್ಲದ ಗುರುಗಳು ಆ ಮಾತಿಗೆ ಸರಿ! ಎಂದಿದ್ದಾನೆ. ಗುರುಗಳ ಹತ್ತಿರ ಹಣವಿಲ್ಲವಾದ್ದರಿಂದ ಆತನಿಗೆ ಕೊಡುವ ಸಾವಿರರೂಪಾಯಿಗಳು ಕೂಡ ಸಾಲ ಮಾಡಬೇಕೆಂದುಕೊಂಡಿದ್ದಾನೆ. ಆ ವಿಷಯ ತಿಳಿದ ಲೆಕ್ಕಾಚಾರಿ ಸಾವಿರ ರೂಪಾಯಿಗಳು ಪ್ರಸ್ತುತ ಬೇರೆಯವನ ಹತ್ತಿರ ಬಡ್ಡಿಗೆ ತರುತ್ತೇನೆ ನಂತರ ಕೊಡಬಹುದೆಂದಿದ್ದಾನೆ. ಹಾಗೆಯೇ ತೆಗೆದುಕೊಂಡುಬಾ ಎಂದಿದ್ದಾರೆ ಗುರುಗಳು. ಲೆಕ್ಕಾಚಾರಿ ಪ್ರಸ್ತುತ ಸಾವಿರ ರೂಪಾಯಿಗಳು ಸಾಹಮಾಡಿದಂತೆ ಮಾಡಿ ಗುರುಗಳ ಹತ್ತಿರ ಅಭಿಮಾನ ಸಂಪಾದಿಸಬೇಕೆಂದುಕೊಂಡಿದ್ದಾನೆ. ಗುರುಗಳಿಗೆ ಈ ವಿಧವಾಗಿ ಮೂರು ವರ್ಷಗಳ ಕಾಲ ಆರುತಿಂಗಳಿಗೊಂದುಸಲ ಚಕ್ರಬಡ್ಡಿ ಬಿದ್ದಿದೆ.

ಗುರುಗಳು ಕೂಡ ಸಾಧಾರಣ ಜೀವಾತ್ಮಯೇ, ಆದ್ದರಿಂದ ಪ್ರಪಂಚದಲ್ಲಿ ಆಗಾಗ ಅಲ್ಲಲ್ಲಿ ಮೋಸಹೋಗಬೇಕಾಗಿ ಬರುತ್ತದೆ. ಜೀವಾತ್ಮನಾಗಿ ಮೋಸಹೋದ ಗುರುಗಳು ಒಂದು ದಿನ ಯೋಗ ಸಮಯದಲ್ಲಿ ಆತ್ಮವಾಗಿ ಬದಲಾಗಿದ್ದಾನೆ. ತನ್ನ ಶರೀರದಲ್ಲಿನ ಆತ್ಮವಾಗಿ ಬದಲಾಗುವುದಲ್ಲದೆ ಸರ್ವಶರೀರದಲ್ಲಿನ ಆತ್ಮವಾಗಿ ಬದಲಾಗಿದ್ದಾನೆ. ಲೆಕ್ಕಾಚಾರಿ ಶರೀರ ಕೂಡ ಆತನೇ ಆದ್ದರಿಂದ ಲೆಕ್ಕಾಚಾರಿ ಶರೀರದಲ್ಲಿ ನಡೆದ ಗುಣಗಳ ಕೆಲಸಗಳೆಲ್ಲ ತಿಳಿದಿವೆ. ಲೆಕ್ಕಾಚಾರಿ ಶರೀರದಲ್ಲಿ ಆತ್ಮ ಎಲ್ಲವನ್ನು ನೋಡುತ್ತಾ ಸಾಕ್ಷಿಯಾಗಿ ಇದೆ ಆದ್ದರಿಂದ ಎಲ್ಲಾ ವಿಷಯಗಳು ಗುರುಗಳಿಗೆ ತಿಳಿದುಹೋಗಿದೆ. ತನ್ನ ಹಣ ಕೊಟ್ಟು ತನ್ನ ಸ್ನೇಹಿತನದೆಂದು ಹೇಳುವುದು, ಆರುತಿಂಗಳಿಗೊಂದುಸಲ ಚಕ್ರಬಡ್ಡಿ ಕೇಳುವುದು ತಿಳಿದ ಗುರುಗಳು ಜ್ಞಾನವೊಂದರ ಬೆಲೆ ಲೆಕ್ಕಾಚಾರಿಗೆ, ಉಳಿದ ಭಕ್ತರಿಗು ತಿಳಿಯಬೇಕೆಂದು ಕೊಂಡಿದ್ದಾನೆ. ನಂತರ ಸ್ವಲ್ಪಕಾಲಕ್ಕೆ ಗುರುಗಳ ಜ್ಞಾನ ತಿಳಿಯುವುದರಿಂದ ಶಿಷ್ಯರು ಗುರುವಿಗೆ ಎಷ್ಟೋ ಋಣದಲ್ಲಿರುತ್ತಾರೆಂದು, ಆ ಋಣ ಎಲ್ಲದಕ್ಕಿಂತ ದೊಡ್ಡಬಾಕಿ ಎಂದು, ಗುರುವಿನ ಋಣ ತೀರಿಸುವುದಕ್ಕೆ ಎಷ್ಟು ಜನ್ಮಗಳಾದರೂ

ಸಾಲದೆಂದು ಹೇಳಿದ್ದಾನೆ. ಆ ಮಾತುಕೇಳಿದ ಲೆಕ್ಕಾಚಾರಿ "ಗುರುಗಳಿಗೆ ನಾವು ಬಾಕಿ ಇರುವಂತೆ ನೋಟು ಬರೆದುಕೊಡಲಿಲ್ಲ ಅಲ್ಲವೆ! ಆತನು ಹೇಳುವ ಜ್ಞಾನಕ್ಕೆ ನಾವು ಹೇಗೆ ಬಾಕೀ ಇರುತ್ತೇವೆ. ಪೈಸಾ ಖರ್ಚು ಇಲ್ಲದಂತೆ ಬಾಯಿಂದ ಹೇಳುವ ಮಾತುಗಳಿಗೆ ನಾವು ಬಾಕೀ ಇರುವುದು ಲೆಕ್ಕಾಚಾರವಿಲ್ಲದ ಮಾತು" ಎಂದುಕೊಂಡನು ಲೆಕ್ಕಾಚಾರಿ. ಲೆಕ್ಕಾಚಾರಿಗೆ ಎಲ್ಲಾ ಕಾಣಿಸುವ ಲೆಕ್ಕಾಚಾರಗಳೇ ತಿಳಿಯುತ್ತವೆ, ಕಾಣಿಸದ ಲೆಕ್ಕಾಚಾರಗಳು ತಿಳಿಯುವುದಿಲ್ಲ. ಆತನ ಮನೋಭಾವನೆಯನ್ನು ಗ್ರಹಿಸಿದ ಗುರುಗಳು ಆತನ ಅಜ್ಞಾನಕ್ಕೆ ನಗಾಡಿದನು.

**ಗುರುಗಳು ಅಂದುಕೊಂಡರೆ ಈಕಡೆಯಾದರೂ ಕಳಿಸಬಲ್ಲನು ಆಕಡೆಯಾದರೂ ಕಳಿಸಬಲ್ಲನು ಅಥವಾ ಜನ್ಮಗಳಿಗಾದರು ಕಳಿಹಿಸಬಲ್ಲನು.** ಗುರುಗಳು ಹೇಳುವುದು ಎಲ್ಲರಿಗೂ ಅನ್ವಯಿಸುವ ಜ್ಞಾನಬೋಧನೆಯೇ. ನೂರುಜನರಿಗೆ ಜ್ಞಾನವನ್ನು ಬೋಧಿಸಿದರೂ ಅದು ಕೆಲವರಿಗೆ ಮೋಕ್ಷದಾರಿ, ಕೆಲವರಿಗೆ ಜನ್ಮಗಳದಾರಿ ತೋರಿಸಬಲ್ಲದು. ಆಲಿಸುವ ಮನುಷ್ಯನ ಭಾವನೆಯನ್ನು ಅನುಸರಿಸಿ ಜ್ಞಾನ ಪ್ರಭಾವವಿರುತ್ತದೆ. ಆದುದರಿಂದ **"ನೀನು ಜ್ಞಾನದ ಬಳಿ ನಾಚಿಕೆಪಟ್ಟರೆ ನಿನ್ನ ಬಳಿ ಜ್ಞಾನ ಕೂಡ ನಾಚಿಕೆಪಡುತ್ತದೆ."** ಎಂದು ಹಿರಿಯರೆಂದಿದ್ದಾರೆ. ಜ್ಞಾನವೊಂದರ ಲೆಕ್ಕಾಚಾರ ತಿಳಿಯದೆ ಜ್ಞಾನದ ಹತ್ತಿರ ಮೋಸ ಮಾಡಿದ ಲೆಕ್ಕಾಚಾರಿಗೆ ಜ್ಞಾನವು ಕೂಡ ಮೋಸವೇ ಮಾಡಿದೆ. ಅದು ಹೇಗೆಂದರೆ! ಒಂದು ದಿನ ಗುರುಗಳಿಗೆ ಶಿಷ್ಯರೆಲ್ಲರೂ ನಮಸ್ಕಾರ ಮಾಡುತ್ತಿದ್ದರು. ಆ ಸಮಯದಲ್ಲಿ ಲೆಕ್ಕಾಚಾರಿ ತಾನು ಕೂಡ ಗುರುವಿನ ಮುಂದೆ ಬಗ್ಗಿ ನಮಸ್ಕಾರ ಮಾಡಿದ್ದಾನೆ. ಆ ಸಮಯದಲ್ಲಿ ಗುರುಗಳ ಬಾಯಿಂದ ಒಂದು ಮಾತು ಹೊರಬಂದಿದೆ. ಆ ಮಾತು ಕೇಳಿದ ಲೆಕ್ಕಾಚಾರಿ ತಿಳಿಯದೆ ಸಂತೋಷ ಪಟ್ಟಿದ್ದಾನೆ. ಹಣದ ವಿಷಯದಲ್ಲಿ ತನ್ನ ಕೆಲಸ ತಿಳಿಯದೆ ಗುರುಗಳು ಸಂತೋಷಪಟ್ಟಿದ್ದಾನೆ ಎಂದುಕೊಂಡಂತೆ, ಹೇಳಿದ ಮಾತಿನ ವಿಷಯ ತಿಳಿಯದೆ ಸಂತೋಷಪಟ್ಟಿದ್ದಾನೆ. ತಾನು ತಿಳಿದು ಮೋಸ ಮಾಡಿದರೂ, ತಿಳಿಯದೇ ತಾನು ಮೋಸಹೋದಂತೆ ಲೆಕ್ಕಾಚಾರಿಗೆ ತಿಳಿಯಲಿಲ್ಲ. ಪ್ರಪಂಚ ವಿಷಯಗಳಲ್ಲಿ ಅತ್ಯಂತ ಬುದ್ಧಿವಂತಿಕೆ

ಉಪಯೋಗಿಸುವ ಲೆಕ್ಕಾಚಾರಿಗೆ ಜ್ಞಾನದಲ್ಲಿ ಕಾಣಿಸದ ಫಲಿತಾಂಶ ತಿಳಿಯದೇಹೋಗಿದೆ. ಅಷ್ಟಕ್ಕು ಗುರುಗಳ ಬಾಯಿಂದ ಬಂದಿರುವ ಮಾತೇನು ಎಂದರೆ, ಅದೇ **"ದೀರ್ಘಾಯುಷ್ಮಾನ್ ಭವ"** ದೀರ್ಘಾಯುಷ್ಮಾನ್ ಭವ ಎನ್ನುವ ಮಾತು ನಿಜವಾಗಲು ಕೆಟ್ಟದನ್ನು ಸೂಚಿಸುವ ದೂಷನೆ ಆದರೂ ಆತನಗದು ಆಶೀರ್ವಾದವಾಗಿ ಕಾಣಿಸಿದೆ. ನಾನು ಹಣ ಕೊಟ್ಟಿರುವುದರಿಂದಲೇ ನನ್ನನ್ನು ಆಶೀರ್ವದಿಸಿದ್ದಾನೆಂದುಕೊಂಡಿದ್ದಾನೆ. ಅಲ್ಲಿ ಕೂಡ ಲಾಭವೇ ಬಂದಿದೆಯೆಂದು ಕೊಂಡಿದ್ದಾನೆ. ಜೀವನದಲ್ಲಿ ಜ್ಞಾನ ತಿಳಿದರೂ ಅದು ತನಗೆ ಉಪಯೋಗಪಡಲಿಲ್ಲ. ಎಷ್ಟು ಜ್ಞಾನ ತಿಳಿದರೂ ಆತನು ಜ್ಞಾನಕ್ಕೆಷ್ಟು ಬೆಲೆಕೊಟ್ಟಿದ್ದಾನೊ, ಜ್ಞಾನವು ಕೂಡ ಆತನಿಗೆ ಅಷ್ಟೇ ಬೆಲೆಕೊಟ್ಟಿದೆ. ಆ ಜನ್ಮ ಮುಗಿದುಹೋದ ನಂತರ ಮರುಜನ್ಮ ಲಭಿಸುವ ಸಂಧಿಕಾಲ ಸೆಕಂಡುಗಳ ಕಾಲವೇ ಇರುತ್ತದೆ. ಆ ಸ್ವಲ್ಪ ಕಾಲದಲ್ಲಿಯೇ ಜೀವನಕ್ಕೆ ಸಂಬಂಧಿಸಿದ ಪ್ರಾರಬ್ಧ ಏರ್ಪಡುತ್ತದೆ. ಆಗ ಗುರುಗಳು ಹೇಳಿದ ಮಾತಿನೊಂದರ ಸಾರಾಂಶದ ಪ್ರಕಾರ ಸಂಚಿತಕರ್ಮದಿಂದ ಪ್ರಾರಬ್ಧ ವಾಗುತ್ತದೆ. ಗುರುಗಳ ಶಾಪದ ಪ್ರಕಾರ ಆ ಹೊಸ ಜನ್ಮದಲ್ಲಿ ದೀರ್ಘಾಯುಸ್ಸು ಏರ್ಪಟ್ಟಿದೆ.

ನಂತರ ಜನ್ಮ ಪುರುಷ ಜನ್ಮವೇ ಉಂಟಾಗುವುದು ಮತ್ತು ಆಚಾರಿ ಕುಲದಲ್ಲಿಯೇ ಹುಟ್ಟುವುದು ವಿಶೇಷ. ಹೋದ ಜನ್ಮದಲ್ಲಿ ಬಂಗಾರದ ಆಭರಣಗಳ ಕೆಲಸ ಮಾಡಿದಾಗ ಈ ಜನ್ಮದಲ್ಲಿ ಕಲ್ಲಿನ ಪ್ರತಿಮೆಗಳನ್ನು ಮಾಡುವ ಕೆಲಸ ಉಂಟಾಗಿದೆ. ಯುಕ್ತವಯಸ್ಸು ನಂತರ ಶಿಲ್ಪಾಚಾರಿಯಾದ ಲೆಕ್ಕಾಚಾರಿ ಐವತ್ತು ವರ್ಷಗಳಿಗೇ ದೃಷ್ಠಿದೋಷದಿಂದ ಕೆಲಸ ಮಾಡಲಾರದೆಹೋದನು. ಕೆಲಸ ಮಾಡುವ ಮಕ್ಕಳು ಸಂಪಾದಿಸಲಿಲ್ಲವೆಂದು ತಂದೆಯನ್ನು ಹೇಳನವಾಗಿ ಮಾತನಾಡತೊಡಗಿದರು. ಐದು ವರ್ಷಗಳ ನಂತರ  ಮಧುಮೇಹ (ಷುಗರ್) ವ್ಯಾಧಿಯಿಂದ ಆಹಾರ ಹೊಟ್ಟೆತುಂಬ ತಿನ್ನಬಾರದ ಪರಿಸ್ಥಿತಿ ಏರ್ಪಟ್ಟಿದೆ. ತಿಂದ ಸ್ವಲ್ಪ ಆಹಾರ ಕೂಡ ರುಚಿಯಿಲ್ಲದ ತಿಂಡಿ. ಕಾಫೀಗಳು ಕುಡಿಯಬಾರದು. ಮತ್ತುಪಾನೀಯಗಳಿಗೆ ಅಭ್ಯಾಸವಾಗಿರುವುದರಿಂದ  ಕುಡಿಯದಂತೆ ಇರಲಾರನು.

ಹೀಗೆ ಐವತ್ತೈದು ವರ್ಷಗಳಿಗೇ ಜೀವನ ದುರ್ಭರವಾಗಿ ತೋಚಿದೆ. ಅರವತ್ತು ವರ್ಷಗಳಿಗೆ ಷುಗರ್ ಕಾಯಿಲೆಯಿಂದ ಒಂದು ಕಾಲನ್ನು ತೆಗೆದುಹಾಕಿರುವುದು ನಡೆದಿದೆ. ಕುಂಟು ತನದ ಬದುಕು ಮತ್ತಷ್ಟು ದುರ್ಭರವಾಗಿದೆ. ಕೆಲವು ದಿನಗಳಿಗೆ ಮಕ್ಕಳು ಸೊಸೆಯರು ಮನೆಯೊಳಗೆ ಬರಬೇಡವೆಂದು ಹೊರಗೆ ಇರಿಸಿದರು. ಅವರು ಬೆಳೆಸಿಕೊಂಡ ನಾಯಿಯನ್ನಾದರೂ ಆಗಾಗ ಮನೆಯೊಳಗೆ ಕರೆದುಕೊಂಡರೂ ತನನ್ನು ಮಾತ್ರ ಮನೆಯೊಳಗೆ ಕರೆದುಕೊಳ್ಳುತ್ತಿರಲಿಲ್ಲ. ಹೀಗೆ ನಾಯಿಗಿಂತ ಹೀನವಾಗಿ ತನ್ನವರು ನೋಡಿದಾಗ, ಶರೀರ ಅಶುಭ್ರತೆಯಿಂದ ಹಂದಿಗಿಂತ ಹೀನವಾಗಿ ತಯಾರಾಗಿದೆ. 70 ವರ್ಷಗಳ ವಯಸ್ಸಿಗೆ ಶರೀರದ ನರಗಳು ಬಲವಿಲ್ಲದೆ ಮೂತ್ರ ವಿಸರ್ಜನೆಗೆ ಹೋಗುವುದಕ್ಕಿಂತ ಮುನ್ನವೇ ಬಟ್ಟೆಯೊಳಗೆ ಮೂತ್ರ ಮಾಡಿಕೊಳ್ಳುವುದರಿಂದ ಆ ವಾಸನೆಗೆ ಸಾಟಿಮನುಷ್ಯರು ತನ್ನ ಹತ್ತಿರಕ್ಕೆ ಮಾತನಾಡಿಸುವುದಕ್ಕು ಕೂಡ ಬರದಂತಿದ್ದರು. ಇಂತಹ ಬದುಕು ಶತ್ರುವಿಗು ಕೂಡ ಬರಬಾರದೆಂದು ತನಗೆ ಮರಣಬಂದರೆ ಒಳ್ಳೆಯದೆಂದು ತಿಳಿಯುತ್ತಿದ್ದನು. ಎಲ್ಲರೂ ಬದುಕುವುದಕ್ಕೆ ದೇವರನ್ನು ಕೋರುತ್ತಿದ್ದರೆ ತಾನು ಮಾತ್ರ ಸಾಯುವುದಕ್ಕೆ ದೇವರನ್ನು ಕೋರುತ್ತಿದ್ದನು.

ಆಚಾರಿ ವಯಸ್ಸು 80 ವರ್ಷಗಳಾಗಿದೆ. ವೃದ್ಧಾಪ್ಯವೆಂದರೆ ಏನೊ?, ಅನಾರೋಗ್ಯವೆಂದರೆ? ಏನೊ ಚೆನ್ನಾಗಿ ಅರ್ಥವಾಗಿದೆ. ಕೊನೆಗೆ ಜೀವನವೆಂದರೆ ಏನೊ? ಅರ್ಥವಾಗಿದೆ. ಮಾನವನಿಗಿಂತ ಪಶು, ಪಕ್ಷಿಗಳ ಜನ್ಮಗಳೇ ಮೇಲನಿಸಿದೆ. ಈ ವಿಧವಾಗಿ ಬದುಕಲಾರದೆ ಸಾವುಬಾರದೆ ದಿನವೊಂದು ಯುಗವಾಗಿ ಕಳೆಯುತ್ತಿರುವಾಗ ಅವರ ಮನೆಗೆ ಒಬ್ಬ ಸ್ವಾಮೀಜಿ ಬಂದಿದ್ದಾನೆ. ಮಕ್ಕಳ ಆಹ್ವಾನದ ಮೇರೆಗೆ ಮನೆಗೆ ಬಂದಿರುವ ಸ್ವಾಮೀಜಿ ದೊಡ್ಡ ಜ್ಯೋತಿಷ್ಯನು ಕೂಡಾ, ಮುಖ ನೋಡುತ್ತಲೇ ನಡೆದಿರುವುದು ನಡೆಯುವುದು ಹೇಳುವಂಥಹ ಸಮರ್ಥನು. ಆ ಸ್ವಾಮೀಜಿ ವಿಷಯ ತಿಳಿದುಕೊಂಡ ಲೆಕ್ಕಾಚಾರಿ ಸ್ವಾಮಿ ಹೊರಗೆ ಹೋಗುವಾಗ ಆತನ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ನಾನು ಬೇಗನೆ ಮರಣಿಸುವಂತೆ ಆಶೀರ್ವದಿಸಿರಿ ಎಂದಿದ್ದಾನೆ. ಏಕೆಂದು

ಸ್ವಾಮಿ ಕೇಳಿದಾಗ, ವೃದ್ಧಾಪ್ಯ ಬಹಳ ದುರ್ಭರವಾದುದೆಂದು ತಾನು ಬದುಕಲಾರದಿದ್ದೇನೆಂದು, ನಾನಿದ್ದು ಮಾಡುವುದೇನು ಇಲ್ಲವೆಂದು, ಸಾಯೋಣ ಎಂದುಕೊಂಡರೆ ಸಾವು ಬರುತ್ತಿಲ್ಲವೆಂದು, ನನಗೆ ಬೇಕಾಗಿರುವುದು ಸಾವು ಆದ್ದರಿಂದ ಅದು ಬರುವಂತೆ ಈ ಶರೀರಬಿಟ್ಟು ಹೋಗುವಂತೆ ಆಶೀರ್ವ ದಿಸಿರೆಂದಿದ್ದಾನೆ. ಅದಕ್ಕೆ ಆ ಸ್ವಾಮಿ ನಗುತ್ತಾ **"ಮಾನವ ಜೀವನ ಸ್ವಲ್ಪ ಕಾಲವೇ ಸುಂದರವಾದುದೆಂದು ನಂತರ ದುರ್ಭರವಾದುದೆಂದು ತಿಳಿಯದೆ, ಹೋದ ಜನ್ಮದಲ್ಲಿ ಪರಮಾರ್ಥವನ್ನು ಬೋಧಿಸಿದ ಗುರುವನ್ನೇ ಮೋಸ ಮಾಡಿದ್ದೀಯಾ. ಹಣದ ಬೆಲೆ ಹೊರತು ಜ್ಞಾನಧನದ ಬೆಲೆ ತಿಳಿಯದ ನಿನಗೆ ಆ ಗುರುಗಳು ಕೊಟ್ಟಿರುವ ಆಶೀರ್ವಾದವೇ ನಿನ್ನ ಪಾಲಿಗೆ ಶಾಪವಾಗಿದೆ. ಆ ದಿನ ನಿನಗೆ ಆಶೀರ್ವಾದವಾಗಿ ಅರ್ಥವಾದ ಅದು ನಿನಗೆ ದುಶ್ಶಕುನವೇ. ದೈವಜ್ಞಾನಕ್ಕೆ ಬೆಲೆಕೊಡದೆ ಜೀವನದಲ್ಲಿ ಧನಕ್ಕೆ ಬೆಲೆಕೊಟ್ಟು ಗುರುವನ್ನೇ ಮೋಸಮಾಡಿದ ನಿನಗೆ 'ದೀರ್ಘಾಯುಷ್ಮಾನು ಭವ' ಎಂದು ಶಪಿಸುವುದು ನಡೆದಿದೆ. ಆ ವಾಕ್ಕು ಫಲಿತವೇ ಎಷ್ಟು ರೋಗವಿದ್ದರು ಸಂಪೂರ್ಣವಾಗಿ ನೂರು ವರ್ಷಗಳು ಬದುಕಬೇಕಾಗಿದೆ. ಇದೇ ನಿನ್ನ ಭವಿಷ್ಯತ್ತು"** ಎಂದು ಹೇಳಿದ್ದಾನೆ. ಆ ಮಾತಿನಿಂದ ಲೆಕ್ಕಾಚಾರಿಗೆ ಹೋದ ಜನ್ಮದ ಲೆಕ್ಕಾಚಾರವೇನೊ ತಿಳಿದಿದೆ. ತನಗೆ ಪರಿಷ್ಕಾರವೇ ಇಲ್ಲವಾ ಎಂದು ಸ್ವಾಮೀಜಿಯನ್ನು ಕೇಳಿದ್ದಾನೆ. ಅದಕ್ಕೆ ಸ್ವಾಮೀಜಿ **"ನಿನಗೆ ವಾಕ್ಕು ಕೊಟ್ಟವನು ಸಾಮಾನ್ಯನು ಅಲ್ಲ. ಸಾಕ್ಷ್ಯಾತ್ತೂ ಭಗವಂತನ ಮಾತು ಅದು, ಆದ್ದರಿಂದ ಅದಕ್ಕೆ ಪರಿಷ್ಕಾರವೇ ಇರುವುದಿಲ್ಲ. ಸಾಟಿ ಮನುಷ್ಯನಾಗಿ ಕಾಣಿಸಿರುವುದರಿಂದ ಆದಿನ ಆತನ ಮಾತುಗಳನ್ನು ಲೆಕ್ಕಿಸದೆ ಆತನನ್ನು ಕುರಿತು ಪಕ್ಕದಲ್ಲಿ ಅವಹೇಳನವಾಗಿ ಮಾತನಾಡಿಕೊಂಡಿರುವುದಕ್ಕೆ ರೋಗ ಬಂದಿದೆ. ಆತನ ಹತ್ತಿರಕ್ಕೆ ಭಕ್ತಿಯಿಂದ ಹೋಗುವವರನ್ನು ನೋಡಿ ಇವರೆಲ್ಲ ಮೋಕ್ಷಕ್ಕೆ ಹೋಗುವ ವರೆಂದು ಅಸೂಯೆಯಿಂದ ಮಾತನಾಡಿರುವುದಕ್ಕೆ ಎಲ್ಲಿಗೆ ಹೋಗದಂತೆ ಕಾಲುಹೋಗಿದೆ. ಗುರುಗಳ ಜ್ಞಾನವನ್ನು ತಿಳಿದು ಕೂಡಾ ಬೆಲೆಕೊಡದೆ ಹೋಗುವುದರಿಂದ ನಿನಗೆ ಸ್ವಂತ ಮಗ ಸೊಸೆಯಂದಿರ ಹತ್ತಿರವೇ ಬೆಲೆಯಿಲ್ಲದೆ ಹೋಗಿದೆ. ಗುರುಗಳಿಗೆ ಸುಳ್ಳುಹೇಳಿ ಹಣದ ವಿಷಯದಲ್ಲಿ ಮೋಸಮಾಡಿರುವುದಕ್ಕೆ**

**ನೀನು ಸಂಪಾದಿಸಿದ ಹಣವನ್ನು ನೀನು ಅನುಭವಿಸುವುದಕ್ಕೆ ಇಲ್ಲದೇ ಏನು ಇಲ್ಲದವನಿಗಿಂತ ಹೀನವಾಗಿ ಹೊರಗಡೆ ಬಿದಿದ್ದೀಯಾ. ಇಷ್ಟು ನಡೆದರು ದೈವಜ್ಞಾನ ಬೇಕೆಂದುಕೊಳ್ಳದೆ ಸಾವು ಬೇಕೆಂದುಕೊಳ್ಳುವುದು ಮೂರ್ಖತ್ವ ಅಲ್ಲವೇ! ಸಾವು ನಿನ್ನ ಇಷ್ಟಾಯಿಷ್ಟಗಳ ಮೇಲೆ ಆಧಾರಪಟ್ಟಿರುವುದಿಲ್ಲ. ಆದ್ದರಿಂದ ಅದು ಯಾವಾಗ ಬರಬೇಕೊ ಆಗಲೇ ಬರುತ್ತದೆ"** ಎಂದು ಹೇಳಿ ಹೊರಟುಹೋದನು.

ಇದನ್ನು ಅನುಸರಿಸಿ ನೋಡಿದರೆ **'ದೀರ್ಘಾಯುಷ್ಮಾನು ಭವ'** ಎನ್ನುವ ಮಾತು ಆಶೀರ್ವಾದದಂತೆ ಇದ್ದರೂ ಅದು ಆಶೀರ್ವಾದವಲ್ಲ ದೂಷಣಯೇ ಎಂದು ತಿಳಿಯುತ್ತಿದೆ. ಹಾಗೆ **"ನೀನು ನಾಶನವಾಗಿ ಹೋಗು"** ಎನ್ನುವ ಮಾತು ದೂಷಣೆಯಂತೆ ಇದ್ದರೂ ಅದು ದೂಷಣೆಯಲ್ಲ ಆಶೀರ್ವಾದವೇಯೆಂದು ತಿಳಿಯುತ್ತಿದೆ. ಆದ್ದರಿಂದ ಬೈಗಳಲ್ಲಿ ಜ್ಞಾನ ಆಶೀರ್ವಾದಗಳಲ್ಲಿ ಅಜ್ಞಾನವಿದೆ ಯೆಂದು ತಿಳಿಸುತ್ತಿದ್ದೇವೆ. ಬೈಗಳು ಆಶೀರ್ವಾದಗಳು ಎರಡು ವಿಧಗಳು ಇದ್ದರೂ ಆಶೀರ್ವಾದಗಳರೂಪದಲ್ಲಿ ಕೆಟ್ಟದನ್ನು ಸೂಚಿಸುವ ಬೈಗಳು, ಬೈಗಳ ರೂಪದಲ್ಲಿ ಒಳ್ಳೆಯದನ್ನು ಸೂಚಿಸುವ ಅಶೀರ್ವಾದಗಳು ಇವೆಯೆಂದು ತಿಳಿಯುತ್ತಿದೆ. ಈಗ ಬೈಗಳ ರೂಪದಲ್ಲಿರುವ ಆಶೀರ್ವಾದಗಳನ್ನು ವಿವರಿಸಿಕೊಳ್ಳೋಣ.

# ನಿನ್ನ ಮುಂಡೆ ಮುಚ್ಚಲಿ

**"ನಿನ್ನ ಮುಂಡೆ ಮುಚ್ಚ"** ಎನ್ನುವ ಮಾತು ಕೂಡ ಬೈಗಳ ರೂಪದಲ್ಲಿರುವ ಆಶೀರ್ವಾದವೆ. ಪೂರ್ವದಲ್ಲಿ ಈ ಮಾತು ಆಶೀರ್ವಾದವಾಗಿ ಹೇಳಲ್ಪಟ್ಟಿದೆ. ಈದಿನ ಅದರ ಅರ್ಥ ತಿಳಿಯದ ಅಜ್ಞಾನ ಮನುಷ್ಯರು ಈ ಮಾತನ್ನೇ ಬೈಗಳಾಗಿ ಮಾತನಾಡುತ್ತಿದ್ದಾರೆ. ಪೂರ್ವದಲ್ಲಿ ಜ್ಞಾನ ಧನವಿರುವ ದೊಡ್ಡ ಗುರುಗಳ ಹತ್ತಿರಕ್ಕಾಗಲಿ, ಮಹರ್ಷಿಗಳ ಹತ್ತಿರಕ್ಕಾಗಲಿ ಸಾಧಾರಣ ಮನುಷ್ಯರು ಹೋಗಿ, ಅಲ್ಲಿ ಅವರ ಹತ್ತಿರ ವಿನಯ ವಿಧೇಯತೆಗಳನ್ನು ಹೊಂದಿ ಜ್ಞಾನಜಿಜ್ಞಾಸಿಗಳಾಗಿ ಇರುವಾಗ, ಅವರಿಗೆ ಜ್ಞಾನ ಉಂಟಾಗಿ ಮೋಕ್ಷವನ್ನು ಹೊಂದಬೇಕೆನ್ನುವ ಒಳ್ಳೆಯ ಉದ್ದೇಶದಿಂದ **"ನಿನ್ನ ಮುಂಡೆ ಮುಚ್ಚಲಿ"** ಎಂದು

ಆಶೀರ್ವದಿಸುತ್ತಿದ್ದರು. ಹೊರಗಿನ ಪ್ರಪಂಚದಲ್ಲಿ ಮುಂಡೆಯಾಗುವುದು ಎಂದರೆ ಗಂಡ ಮರಣಿಸಿದಾಗ ಹೆಂಡತಿಗೆ ಅರಿಸಿಣ ಕುಂಕುಮಗಳು, ಬಳೆಗಳು, ಕಾಲುಂಗರ ತಾಳಿ (ಆಲಿ) ಬೊಟ್ಟನ್ನು ತೆಗೆದುಹಾಕುವುದನ್ನು ಮುಂಡೆಯಾಗುವುದೆಂದು ಹೇಳುತ್ತಿರುತ್ತಾರೆ. ಪೂರ್ವದಲ್ಲಿ ಜ್ಞಾನ ಸಂಬಂಧವಾದ ಅರ್ಥದಿಂದ ನೀನು ಮುಂಡೆಯಾಗು ಎನ್ನುವ ಮಾತನ್ನು ಬಾಹ್ಯಾರ್ಥದಿಂದ ಹೋಲಿಸಿ ನೋಡಿಕೊಂಡರೆ ಬೈಯುವುದಾಗಿಯೇ ಕಾಣಿಸುತ್ತದೆ. ಈದಿನ ಆ ಮಾತನ್ನು ಅನ್ನುವವರು ಕೂಡ ಹೊರಗಿನ ಅರ್ಥದಿಂದಲೇ ಎನ್ನುವುದರಿಂದ ಪೂರ್ತಿ ದೂಷಣೆ ಕೆಳಗೆ ಬದಲಾಗಿಹೋಗಿದೆ. ನೀನು ಮುಂಡೆಯಾಗು ಎನ್ನುವ ಒಂದೇ ಮಾತು ಜ್ಞಾನದ ಪ್ರಕಾರ ಆಶೀರ್ವಾದದ ಅಜ್ಞಾನ ಪ್ರಕಾರ ಬೈಗಳಂತಿದೆ. ಅಜ್ಞಾನದ ಪ್ರಕಾರ ಹೆಂಗಸರನ್ನು ಬೈಯ್ಯುವಾಗ ನಿನ್ನ ಗಂಡ ಸತ್ತುಹೋಗಬೇಕೆಂದು ಅಶುಭವನ್ನು ಸೂಚಿಸುವಂತೆಯು, ಗಂಡಸರನ್ನು ಬೈಯ್ಯುವಾಗ ನಿನ್ನ ಹೆಂಡತಿ ಸತ್ತುಹೋಗಬೇಕೆಂದು ಅಶುಭವನ್ನು ಸೂಚಿಸುವಂತೆಯು, ಅರ್ಥಬರುವಂತೆ “ನೀನು ಮುಂಡೆಯಾಗಲಿ” ಎನ್ನುತ್ತಿದ್ದಾರೆ.

ಜ್ಞಾನದ ಪ್ರಕಾರ ಆಶೀರ್ವಾದವಾಗಿ ಹೇಗಿದೆಯೆಂದರೆ! ಜಗತಿನಲ್ಲಿ ಚಪಲತ್ವವಾಗಿ ಸ್ತ್ರೀಯನ್ನು ‘ಮುಂಡೆ’ ಎನ್ನುವುದು ಸಹಜ. ವ್ಯಭಿಚರಿಸುವ ಸ್ತ್ರೀಯನ್ನು ಸೂಳೆಮುಂಡೆ ಎನ್ನುವುದು ಕೂಡ ನಡೆಯುತ್ತಿದೆ. ಶರೀರದಲ್ಲಿ ಚಪಲತ್ವ ಇರುವ ಮನಸ್ಸನ್ನು ಮುಂಡೆಗೆ ಸಮಾನವಾಗಿ ಹೋಲಿಸಿ ಹೇಳುತ್ತಿದ್ದೇವೆ. ಮುಚ್ಚಲಿ ಎಂದರೆ ಇಲ್ಲದಂತೆ ಮಾಡುವುದೆಂದು ಅರ್ಥ. ಮುಚ್ಚಲಿ ಎನ್ನುವ ಪದ ಕಾಲಕ್ರಮವಾಗಿ ಬದಲಾಗಿದೆ. ಮುಂಡೆ ಮುಚ್ಚಲಿ ಎಂದರೆ ವ್ಯಭಿಚರಿಸುವ ಮನಸ್ಸನ್ನು ಅಡಗಿಸಿಹಾಕುವುದೆಂದು ಅರ್ಥ. ಚಂಚಲ ಮನಸ್ಸು ಯಾವಾಗ ನಿಂತುಹೋಗುತ್ತದೊ ಆಗ **‘ಬ್ರಹ್ಮಯೋಗ’** ಲಭಿಸುತ್ತದೆ. ಬ್ರಹ್ಮಯೋಗ ಲಭಿಸಬೇಕೆಂದರೂ ಮನಸ್ಸು ಇಲ್ಲದಂತೆ ಹೋಗಬೇಕು. ಮನಸ್ಸನ್ನು ಅಡಗಿಸುವುದು ಬಹಳ ಕಷ್ಟವಾದ ಕೆಲಸ. ಮನೋ ಸಂಕಲ್ಪವನ್ನು ಇಲ್ಲದಂತೆಮಾಡಿ ಮನಸ್ಸನ್ನು ಅಡಗಿಸುವುದು ಗಾಳಿಯನ್ನು ಮುಟೆಕಟ್ಟಿದಷ್ಟು ಕೆಲಸವಾಗುತ್ತದೆ. ಎಷ್ಟೋ

ದುರ್ಲಭವಾದ ಮನೋನಿಲುಗಡೆಗೆ ಒಬ್ಬ ಗುರು ಶಿಷ್ಯನನ್ನು ಆಶೀರ್ವದಿಸಿದ ಆಶೀರ್ವಾದವೇ **'ನೀನು ಮುಂಡೆಮುಚ್ಚಲಿ'**. ಮುಂಡೆ ಎಂದರೆ 'ಮನಸ್ಸು' ಮುಚ್ಚಲಿ ಎಂದರೆ ಇಲ್ಲದಂತೆ ಮಾಡುವುದೆಂದು ಅರ್ಥ ತೆಗೆದುಕೊಂಡರೆ, ನೀನು ಮನಸ್ಸನ್ನು ಜಯಿಸೆಂದು ಆಶೀರ್ವಾದಿಸುವುದೇ ಆಗುತ್ತದೆ. ಜ್ಞಾನಪರವಾಗಿ ಮುಂಡೆಯಾಗುವುದು ಆಶೀರ್ವಾದವಾಗಿದೆ. ಈ ಮಾತನ್ನೇ ಇನ್ನೊಂದು ವಿಧವಾಗಿ ಕೂಡ ಆಶೀರ್ವದಿಸುತ್ತಿದ್ದರು. **"ನೀನು ಮೂರು ದಾರಿಗಳು ಸೇರುವ ಕಡೆ ಮುಂಡೆಮುಚ್ಚು"** ಎನ್ನುವುದು ಕೂಡ ನಡೆಯುತ್ತಿತ್ತು. ಇಲ್ಲಿ 'ಮೂರುದಾರಿಗಳು ಸೇರುವಕಡೆ' ಎನ್ನುವುದು ವಿಶೇಷ. ಶರೀರದಲ್ಲಿನ ಮನಸ್ಸನ್ನು ಇಲ್ಲದಂತೆ ಮಾಡಿಕೊಂಡು ಬ್ರಹ್ಮಯೋಗವನ್ನು ಹೊಂದುವುದು ಆಶೀರ್ವಾದದಲ್ಲಿನ ಮುಖ್ಯ ಉದ್ದೇಶ ಆಗಿರುವುದರಿಂದ ಮೂರು ದಾರಿಗಳು ಕೂಡ ಶರೀರದಲ್ಲಿಯೇ ಇರುತ್ತವೆಂದು ಆಲೋಚಿಸಬೇಕಾದ ಅವಶ್ಯಕತೆಯಿದೆ. ಆ ವಿಧವಾಗಿ ಆಲೋಚಿಸಿದರೆ ನಮ್ಮ ಶರೀರದಲ್ಲಿ ಮುಖ್ಯವಾದ ಮೂರು ನಾಡಿಗಳು ಸೇರುವ ಸ್ಥಳ ಇದೆ. **ಇಡ, ಪಿಂಗಳ, ಸುಷುಮ್ನ** ಎನ್ನುವ ಮೂರು ಮುಖ್ಯವಾದ ನಾಡಿಗಳು ಶರೀರದಲ್ಲಿ ಇವೆ. ಇವುಗಳನ್ನೇ ಸೂರ್ಯನಾಡಿ, ಚಂದ್ರನಾಡಿ, ಬ್ರಹ್ಮನಾಡಿ ಎನ್ನುವ ಹೆಸರಿರುವ ಮೂರುನಾಡಿಗಳಾಗಿ ಹೇಳಿಕೊಂಡಿದ್ದೇವೆ. ಈ ಮೂರು ನಾಡಿಗಳು ತಲೆಮಧ್ಯ ಭಾಗದಲ್ಲಿ ಬೆರೆಯುತ್ತಿವೆ. ತಲೆಯೊಳಗೆ ಸೇರುವ ಮೂರುನಾಡಿಗಳನ್ನು ಹೊರಗೆ ಕಾಣಿಸುವಂತೆ ಮೂಗಿನಮೇಲೆ ಹಣೆಯಭಾಗದಲ್ಲಿ ಮೂರು ನಾಮಗಳಾಗಿ ತೀಡಿತಿದ್ದುವುದು ಇಂದಿಗೂ ನಡೆಯುತ್ತಿದೆ. ಪೂರ್ವದಲ್ಲಿ ಮೂರು ನಾಡಿಗಳ ವಿಷಯ ತಿಳಿದ ಜ್ಞಾನಿಗಳು ಅವುಗಳನ್ನು ಹೊರಗೆ ಕಾಣಿಸುವಂತೆ ಇಟ್ಟಿದ್ದಾರೆ. ಈದಿನ ಪೂರ್ವದ ಪದ್ಧತಿಯನ್ನು ಕೆಲವರು ಅನುಸರಿಸಿ ಹಣೆಯಮೇಲೆ ನಾಮಗಳನ್ನು ತಿದ್ದುಕೊಂಡರೂ ಅವುಗಳ ಅರ್ಥ ತಿಳಿದಿಲ್ಲ. ನಾಮ ಇಟ್ಟುಕೊಂಡವರು ವೈಷ್ಣವರೆಂದುಕೊಳ್ಳುವುದು ನಡೆಯುತ್ತಿದೆ. ಒಳಗಿನ ನಾಡಿಗಳ ಇರುವಿಕೆಯನ್ನು ತಿಳಿಸುವುದಕ್ಕೆ ನಾಮಗಳು ಇಡುವುದೆಂದು ಯಾರಿಗೂ ತಿಳಿಯದೇ ಹೋಗಿದೆ. ಮೂರು ನಾಡಿಗಳಲ್ಲಿ ಸೂರ್ಯ ಚಂದ್ರನಾಡಿಗಳೆನ್ನುವ ಎರಡು ನಾಡಿಗಳಲ್ಲಿ ಮನಸ್ಸು ಜಾಗ್ರತಾವಸ್ಥೆಯಲ್ಲಿ ಇರುತ್ತದೆ. ಬ್ರಹ್ಮನಾಡಿಯಲ್ಲಿ

ಇರುವಾಗ ನಿದ್ರಾವಸ್ಥೆಯಲ್ಲಿ ಇರುತ್ತದೆ. ಮೂರು ನಾಡಿಗಳು ಮೇಲೆ ಕಾಣಿಸುವ ಕಣ್ಣುಬ್ಬುಗಳ ಮಧ್ಯ ಭಾಗದಲ್ಲಿ ತಲೆಮಧ್ಯದಲ್ಲಿ ಕೂಡಿರುತ್ತವೆ. ಈ ಮೂರು ನಾಡಿಗಳು ಸೇರುವ ಸ್ಥಳವನ್ನು ತ್ರಿವೇಣಿಸಂಗಮವೆಂದು, ಗಂಗ, ಯಮುನ, ಸರಸ್ವತಿ ಸೇರುವ ಸ್ಥಳವೆಂದು ಎನ್ನುವುದಿದೆ.

ಮೂರು ನಾಡಿಗಳು ಸೇರುವ ಸ್ಥಳವನ್ನೇ ಮೂರು ದಾರಿಗಳು ಸೇರಿದ ಸ್ಥಳವೆಂದು ಕರೆಯುವುದು ನಡೆಯುತ್ತಿದೆ. ಶರೀರದಲ್ಲಿನ ಮನಸ್ಸನ್ನು ಮೂರು ನಾಡಿಗಳು ಬರೆಯುವ ಭೃಕುಟಿ ಸ್ಥಾನದಲ್ಲಿಯೇ ಲಗ್ನ ಮಾಡಿ ಹೊರಗಿನ ಚಿಂತೆಗಳು ಇಲ್ಲದಂತೆ ಮಾಡುವುದನ್ನೇ **"ಬ್ರಹ್ಮಯೋಗ"** ಎನ್ನುತ್ತಿದ್ದೇವೆ. ಮನಸ್ಸು ಎಚ್ಚರದಲ್ಲಿಯೂ ನಿದ್ರೆಯಲ್ಲಿಯೂ ಇಲ್ಲದಂತೆ ಒಳಗೆ ಜ್ಞಾಪಕಹೊಂದಿ ಬ್ರಹ್ಮನಾಡಿಯಲ್ಲಿ ಸೂರ್ಯಚಂದ್ರನಾಡಿಗಳು ಸೇರುವ ಸ್ಥಳ ತಲೆ ಮಧ್ಯದಲ್ಲಿ ನಿಲ್ಲಿಸುವುದನ್ನು ಬ್ರಹ್ಮಯೋಗವೆನ್ನುತ್ತೇವೆ. ಆದ್ದರಿಂದ **'ಮೂರುದಾರಿಗಳು ಸೇರುವ ಸ್ಥಳದಲ್ಲಿ ಮುಂಡೆ ಮುಚ್ಚಲಿ"** ಎಂದು ಪೂರ್ವದಲ್ಲಿ ಆಶೀರ್ವದಿಸುತ್ತಿದ್ದರು. ಜ್ಞಾನಪದ್ಧತಿ ಪ್ರಕಾರ ದೊಡ್ಡ ಉದ್ದೇಶದಿಂದ ಆಶೀರ್ವದಿಸಿದ ಆಶೀರ್ವಾದ ಈದಿನ ಅಜ್ಞಾನದಿಂದ ದೂಷಿಸುವ ಬೈಗಳಾಗಿ ಬದಲಾಗಿಹೋಗಿದೆ. ಪೂರ್ವದಲ್ಲಿ ದೊಡ್ಡ ಜ್ಞಾನಿಗಳಾದ ಗುರುಗಳು ಮಹರ್ಷಿಗಳು ತಮ್ಮ ಹತ್ತಿರಕ್ಕೆ ಜ್ಞಾನಕ್ಕಾಗಿ ಬಂದವರಿಗೆ ಬೇಗನೆ ಜ್ಞಾನ ಉಂಟಾಗಲಿಯೆಂದು, ಅವರು ಬೇಗನೆ ಮೋಕ್ಷ ಹೊಂದಬೇಕೆಂದು ಆಶೀರ್ವದಿಸುತ್ತಿದ್ದರು. ಬ್ರಹ್ಮಯೋಗ ಲಭ್ಯವಾಗಬೇಕೆಂದು ಆಶೀರ್ವದಿಸಿದ ಮಾತನ್ನೇ **"ನೀನು ಮುಂಡೆ ಮುಚ್ಚಲಿ"** ಎಂದು ತಿಳಿದು ಕೊಂಡಿದ್ದೇವೆ.

# ನಿನ್ನ ಹಗ್ಗ ಹರಿಯಲಿ

ನಾವು ಅಂದುಕೊಂಡವುಗಳಲ್ಲಿ ಮತ್ತೆ ಕೆಲವು ಆಶೀರ್ವಾದಗಳು ಇವೆ. ಅದರಲ್ಲಿ ಒಂದು **"ನಿನ್ನ ಹಗ್ಗ ಹರಿಯಲಿ"** ಎನ್ನುವುದು ಹಗ್ಗ ಕಟ್ಟಿಹಾಕುವುದಕ್ಕೆ ಕೆಲಸಕ್ಕೆ ಬರುವುದು. ಹಗ್ಗ ಬಂಧಿಸುವುದು ಆದ್ದರಿಂದ **'ಬಂಧ'** ಎನ್ನುತ್ತಿದ್ದೇವೆ.

ಬಂಧಿಸಲ್ಪಡುವುದನ್ನು ಬಂಧಿ ಎನ್ನುತ್ತಿದ್ದೇವೆ. ಆಧ್ಯಾತ್ಮಿಕದ ಪ್ರಕಾರ **'ಕರ್ಮ'** ಎನ್ನುವುದು ಬಂಧನ ಎನ್ನುವ ಹಗ್ಗವಾಗಿ, ಜೀವಿಯು ಬಂಧಿಸಲ್ಪಟ್ಟಿರುವ ಬಂಧಿಯಾಗಿ ಇದ್ದಾನೆ. ಪಾಪುಣ್ಯಗಳೆನ್ನುವ ಕರ್ಮ ಬಂಧನವು ಜೀವಿಯನ್ನು ಬಂಧಿಸಿ ಜನ್ಮಗಳಿಗೆ ಕಳಿಸುತ್ತಿದೆ. ಯಾವಾಗಾದರೆ ಕರ್ಮ ಇಲ್ಲದಂತೆ ಹೋಗುತ್ತದೊ ಆಗ ಜೀವಿಯು ಮೋಕ್ಷ ಹೊಂದುತ್ತಾನೆ. ಮೋಕ್ಷ ಎಂದರೆ ಬಿಡುಗಡೆ ಎಂದು ಅರ್ಥ. ಕರ್ಮಬಂಧನದಿಂದ ಬಿಡುಗಡೆ ಹೊಂದುವುದನ್ನೇ ಮುಕ್ತಿ, ವಿಮುಕ್ತಿ ಎನ್ನುತ್ತಿದ್ದೇವೆ. ಜ್ಞಾನ ತಿಳಿದುಕೊಳ್ಳುವವನು ಬೇಗನೆ ಮುಕ್ತಿ ಹೊಂದಬೇಕೆಂದು ಹಿರಿಯರು ಆಶೀರ್ವದಿಸುವ ಮಾತನ್ನು ಪೂರ್ವದಲ್ಲಿ **"ನಿನ್ನ ಹಗ್ಗ ಹರಿಯಲಿ"** ಎನ್ನುತ್ತಿದ್ದರು. ಈದಿನ ಆ ಮಾತಿನೊಂದರ ಅರ್ಥ ತಿಳಿಯದೆ ಹೋಗಿರುವುದರಿಂದ ಕೋಪದಿಂದ ಯಾರನ್ನಾದರೂ ಬೈಯ್ಯುವಾಗ ದೂಷಣೆ **"ನಿನ್ನ ಹಗ್ಗ ಹರಿಯಲಿ"** ಎನ್ನುವುದು ನಡೆಯುತ್ತಿದೆ. ಆದಿನ ದಯೆಯಿಂದ ಹೇಳಿದ ಮಾತು ಆಶೀರ್ವಾದವಾದಾಗ, ಈದಿನ ಕೋಪದಿಂದ ಹೇಳುತ್ತಿರುವ ಅದೇಮಾತು ಬೈಗಳಾಗಿ ಚಲಾವಣೆ ಆಗುತ್ತಿದೆ.

# ನಿನ್ನ ಎಲೆ ಹರಿಯಲಿ

ಇದೇ ವಿಧವಾಗಿ ಪೂರ್ವದಲ್ಲಿ ದಯೆಯಿಂದ ಆಶೀರ್ವದಿಸಿದ ಆಶೀರ್ವಾದ ಮತ್ತೊಂದು ಇದೆ. ಅದೇ **"ನಿನ್ನ ಎಲೆ ಹರಿಯಲಿ"** ಈ ಮಾತಿನಲ್ಲಿ ಪೂರ್ವದ ಜ್ಞಾನಿಗಳ ಉದ್ದೇಶವೇನೊ ವಿವರಿಸಿಕೊಳ್ಳೋಣ. ಕೆಲವು ಸಾವಿರ ನೂರು ವರ್ಷಗಳ ಪೂರ್ವದಲ್ಲಿ ಬರೆಯುವುದಕ್ಕೆ ಕಾಗದಗಳು ಇಲ್ಲದ ಕಾಲದಲ್ಲಿ ಆದಿನ ಬರಹವನ್ನು ತಾಳೆ ಎಲೆಗಳ ಮೇಲೆ ಬರೆಯುತ್ತಿದ್ದರು. ಬರಹ ಎನ್ನುವುದು ಎಲೆಗಳ ಮೇಲೆಯೇ ಇರುತ್ತಿತ್ತೆಂದು ಆಗಿನಕಾಲದಲ್ಲಿ ಎಲ್ಲರಿಗೂ ತಿಳಿಯುತ್ತಿತ್ತು. ಜೀವಿಯ ಕರ್ಮಕೂಡ ಲಿಖಿಸಲ್ಪಟ್ಟಿದೆಯೆಂದು, ಕರ್ಮಬರಹ ಬಿಳಿಯ ಪತ್ರದ ಮೇಲೆ ಬರೆಯಲ್ಪಟ್ಟಿದೆಯೆಂದು ಪೂರ್ವದಲ್ಲಿ ಹಿರಿಯರು ಹೇಳುತ್ತಿದ್ದರು. ತಾಳೆ ಎಲೆಗಳ ಮೇಲೆ ಹೊರಗಿನ ಬರಹಗಳು ಬರೆಯಲ್ಪಟ್ಟಂತೆ **ಲಲಾಟ ಪತ್ರದ**

ಮೇಲೆ ಕರ್ಮಬರಹಗಳು ಇವೆಯೆಂದು, ಅದರ ಪ್ರಕಾರವೇ ನಡೆಯುತ್ತದೆಂದು ಅಂದಿನ ಜ್ಞಾನಿಗಳ ಉದ್ದೇಶವಿರುತ್ತಿತ್ತು. ಕರ್ಮಬರಹ ಇಲ್ಲದೇ ಹೋದರೆ ದೇವರಲ್ಲಿ ಐಕ್ಯವಾಗುತ್ತೀರೆಂದು ಹೇಳುತ್ತಿದ್ದರು. ಕರ್ಮ ಬರವಣಿಗೆ ಇಲ್ಲದೇ ಹೋಗಬೇಕೆಂದರೆ ಕರ್ಮ ಲಿಖಿತವೇ ಆಗಬಾರದೆಂದು, ಕರ್ಮ ಲಿಖಿತ ಆಗದಂತೆ ಇರಬೇಕೆಂದರೆ ಕರ್ಮ, ಕರ್ಮ ಬರೆಯುವ ಪತ್ರವೇ ಇರಬಾರದೆಂದು ಅಂದಿನವರ ಭಾವನೆ. ಆದುದರಿಂದ ತಮ್ಮ ಶಿಷ್ಯರನ್ನು ಆಶೀರ್ವಾದಿಸುವಾಗ ಕೆಲವರು ಗುರುಗಳು ಆಶೀರ್ವಾದವಾಗಿ **"ನಿನ್ನ ಎಲೆ ಹರಿಯಲಿ"** ಎನ್ನುತ್ತಿದ್ದರು. ತಮ್ಮ ಶಿಷ್ಯರಿಗೆ ಕರ್ಮಇಲ್ಲದಂತೆಹೋಗಿ ಮೋಕ್ಷ ಲಭಿಸಬೇಕೆನ್ನುವ ಉದ್ದೇಶದಿಂದ ನಿನ್ನ ಎಲೆ ಹರಿಯಲಿ ಎಂದು ಶುಭ ಉಂಟಾಗುವಂತೆ ಹೇಳುತ್ತಿದ್ದರು. ಕರ್ಮವಿಮುಕ್ತಿ ಮಾಡುವ ಅರ್ಥಗಳಲ್ಲಿ ನಿನ್ನ ಎಲೆ ಹರಿಯಲಿ ಎನ್ನುವ ಮಾತು ಆಶೀರ್ವಾದಗಳಲ್ಲಿ ಸೇರಿದೆ. ಈಗ ಅದು ಉಳಿದ ಆಶೀರ್ವಾದಗಳಂತೆ ಅರ್ಥ ತಿಳಿಯದೇ ಹೋಗಿ ಕೊನೆಗೆ ಬೈಗುಳೊಳಗೆ ಸೇರಿಹೋಗಿದೆ. ಕೆಲವರು ಅಜ್ಞಾನಿಗಳು ನಿನ್ನ ಎಲೆ ಹರಿಯಲಿ ಎಂದು ಶಾಪನಾರ್ಥವಾಗಿ ದೂಷಿಸಿ ಕೊಳ್ಳುವುದು ಹಳ್ಳಿ ಪ್ರಾಂತ್ಯಗಳಲ್ಲಿ ನೋಡುತ್ತಲೇ ಇದ್ದೇವೆ.

# ನಿನ್ನ ತಲೆ ಹಣ್ಣು ಹೊಡೆಯಲಿ

ಪೂರ್ವದಲ್ಲಿ ಜಂಬುಕೇಶ್ವರನೆನ್ನುವ ಒಬ್ಬ ಮಹರ್ಷಿ ಉತ್ತರದೇಶದಲ್ಲಿ ಹಿಮಾಲಯ ಪ್ರಾಂತ್ಯದಲ್ಲಿ ನಿವಾಸಿಸುತ್ತಿದ್ದನು. ಆತನು ಬಹಳ ದೊಡ್ಡ ಜ್ಞಾನಿ. ಯೋಗಪುರುಷನೆಂದು ತಿಳಿದು ಅನೇಕ ಜನ ಆತನ ಹತ್ತಿರಕ್ಕೆ ಬಂದು ಕೆಲವರು ಜ್ಞಾನವನ್ನು ಆಶಿಸಿದರೆ, ಕೆಲವರು ಪ್ರಪಂಚ ವಿಷಯಗಳನ್ನು ಕೇಳುತ್ತಿದ್ದರು. ಪ್ರಪಂಚ ವಿಷಯಗಳಿಗೆ ಸ್ವಲ್ಪವೂ ಬೆಲೆ ಕೊಡದ ಜಂಬುಕೇಶ್ವರಮುನಿ ಜ್ಞಾನ ಜಿಜ್ಞಾಸಿಗಳನ್ನು ತನ್ನ ಹತ್ತಿರ ಇಟ್ಟುಕೊಂಡು ಉಳಿದವರನ್ನು ಅಲ್ಲಿಂದ ಕಳಿಸುತ್ತಿದ್ದನು. ಜ್ಞಾನದ ಮೇಲೆ ಆಸಕ್ತಿ ಹೊಂದಿದವರನ್ನು ಕೂಡ ಎಷ್ಟೋ ಕಷ್ಟಗಳಿಗೆ ಗುರಿಮಾಡಿ ಎಲ್ಲದಕ್ಕು ಸಹಿಸಿಕೊಂಡು ತನ್ನ ಸೇವೆ ಮಾಡಿದವರಿಗೆ

ಮಾತ್ರ ಜ್ಞಾನವನ್ನು ಬೋಧಿಸುತ್ತಿದ್ದನು. ಜ್ಞಾನವನ್ನು ಬೋಧಿಸಿದ ನಂತರ ಅದರ ಪ್ರಕಾರ ನಡೆದುಕೊಂಡು ಅವನನ್ನು ಪುನಃ ಹಿಂದಕ್ಕೆ ಕಳಿಸುತ್ತಿದ್ದನು. ಅಂತಹವರ ಹತ್ತಿರ ಜ್ಞಾನ ತಿಳಿದುಕೊಳ್ಳುವುದಕ್ಕೆ ಬಹಳ ಜನ ಪ್ರಯತ್ನಿಸುತ್ತಿದ್ದರೂ ಆತನ ಶಿಕ್ಷಣಕ್ಕೆ ಬಹಳ ಜನ ನಿಲ್ಲದಂತಿದ್ದರು. ಜಂಬುಕೇಶ್ವರ ಮಹರ್ಷಿ ಗುರುಗಳಿಗೆಲ್ಲರಿಗಿಂತ ದೊಡ್ಡವನೆಂದು, ಆತನ ಹತ್ತಿರ ದೊಡ್ಡ ಜ್ಞಾನ ಇದೆಯೆಂದು ತಿಳಿದವರು ಕೆಲವರು ದಕ್ಷಣ ದೇಶದಿಂದ ಹೊರಟುಹೋಗಿದ್ದಾರೆ. ಅವರಲ್ಲಿ ಇಬ್ಬರು ಒಂದು ಮನೆಯಿಂದ  ಹೊರಟಿರುವ ಅಣ್ಣತಮ್ಮಂದಿರಿದ್ದರು. ಹಿಮಾಲಯಗಳಲ್ಲಿ ಜಂಬುಕೇಶ್ವರ ಮುನಿಯನ್ನು ಸೇರಿಕೊಂಡ ದಕ್ಷಿಣ ದೇಶಸ್ಥರು ಕೆಲವರು ಕೊನೆಯವರೆಗು ನಿಲ್ಲಲಾರದೆ ಹೋಗಿದ್ದಾರೆ. ಜಂಬುಕೇಶ್ವರನು ಹೇಳುವ ಜ್ಞಾನ ದೊಡ್ಡದೇ, ಇಡುವ ಪರೀಕ್ಷೆಗಳು ದೊಡ್ಡವೇ. ಆತನು ಇಡುವ ಜ್ಞಾನಸಂಬಂಧ ಪರೀಕ್ಷೆಗಳಲ್ಲಿ ಅವರಗುಣಗಳು ಹೊರಬೀಳುವುದು ಅವರಿಗೆ ಅಲ್ಲಿ ಸ್ಥಾನ ಇಲ್ಲದಂತೆ ಹೋಗುವುದು ನಡೆದಿದೆ. ಕೊನೆಗೆ ಅಣ್ಣತಮ್ಮಂದಿರು ಮಾತ್ರ ಗಟ್ಟಿಯಾಗಿ ನಿಂತಿದ್ದಾರೆ. ಅವರಲ್ಲಿರುವ ಛಲಕ್ಕೆ ಜಂಬುಕೇಶ್ವರನಿಗೆ ಸಂತೋಷ ಉಂಟಾಗಿದೆ. ಇಬ್ಬರು ಭಕ್ತರಲ್ಲಿ ದೊಡ್ಡವನು ಚಿಕ್ಕವನಿಗಿಂತ ಹೆಚ್ಚಾಗಿ ಜ್ಞಾನಾಸಕ್ತಿ ಹೊಂದಿರುವುದನ್ನು ಗ್ರಹಿಸಿದ ಜಂಬುಕೇಶ್ವರನು ಒಂದು ದಿನ ಆತನು ಪಾದ ನಮಸ್ಕರ ಮಾಡಿಕೊಂಡಾಗ **"ನಿನ್ನ ತಲೆಹಣ್ಣು ಹೊಡೆಯಲಿ"** ಎಂದು ಆಶೀರ್ವಾದಿಸಿದ್ದಾನೆ. ಆ ಆಶೀರ್ವಾದದಲ್ಲಿನ ಭಾವನೆ ಸೊದರರಿಬ್ಬರಿಗೆ ಅರ್ಥವಾಗಲಿಲ್ಲ. ಅದರೂ ದೊಡ್ಡವನು ಗುರುವಿನ ಮೇಲೆ ಹೆಚ್ಚು ನಂಬಿಕೆ ಇರುವವನು, ಆದ್ದರಿಂದ ಆತನು ಏನು ಹೇಳಿದರೂ ಅದು ನನಗೆ ಶುಭವನ್ನು ಉಂಟುಮಾಡುವುದೇ ಆಗಿರುತ್ತದೆಂದುಕೊಂಡಿದ್ದಾನೆ. ಚಿಕ್ಕವನು ಮಾತ್ರ ಇದೇನೊ ಅಶುಭವನ್ನು ಉಂಟುಮಾಡುವ ಮಾತೆಂದು ಅಂದುಕೊಂಡಿದ್ದಾನೆ. ಅವರ ಮನಸ್ಸಿನಲ್ಲಿನ ಉದ್ದೇಶಗಳನ್ನು ಗ್ರಹಿಸಿದ ಜಂಬುಕೇಶ್ವರನು ಒಂದು ದಿನ ಇಬ್ಬರನ್ನು ಕರೆದು ನಾನು ಆಶೀರ್ವದಿಸಿದ  ಆಶೀರ್ವಾದವನ್ನು ಕುರಿತು ಒಬ್ಬರು ಒಳ್ಳೆಯಭಾವನೆ ಹೊಂದಿರುವುದು, ಮತ್ತೊಬ್ಬರು ಕೆಟ್ಟ ಭಾವನೆ ಹೊಂದಿರುವುದು ನನಗೆ ತಿಳಿದಿದೆಯೆಂದು ಹೇಳಿದ್ದಾನೆ. ಈ ವಿಧವಾಗಿ ನಿಮ್ಮ ಮನಸ್ಸುಗಳಲ್ಲಿ

ಇರುವುದರಿಂದ ಸ್ವಲ್ಪಕಾಲಕ್ಕೆ ಅಶುಭವನ್ನು ಶಂಕಿಸಿದವರು ಅಜ್ಞಾನದಲ್ಲಿ ಬಿದ್ದು, ಮಾಯ ಪ್ರೇರಣೆಯಿಂದ ನನ್ನಿಂದ ದೂರವಾಗಿಹೋಗುವುದಕ್ಕೆ ಅವಕಾಶವಿದೆ. ಆದ್ದರಿಂದ ನಿಮಗೆ ತಿಳಿಯದ ನನ್ನ ವಾಕ್ಯವನ್ನು ಕುರಿತು ನಿಮಗೆ ವಿವರವಾಗಿ ತಿಳಿಸಬೇಕೆಂದುಕೊಂಡಿದ್ದೇನೆ ಎಂದು ಹೀಗೆ ಹೇಳತೊಡಗಿದನು.

"ನಾವು ಹೇಳುವ ಮಾತುಗಳನ್ನು ಕಾಣಿಸುವ ಪ್ರಪಂಚ ಅರ್ಥದಿಂದ ಮತ್ತು ಕಾಣಿಸದ ದೈವ ಅರ್ಥದಿಂದ ಎರಡು ವಿಧಗಳು ನೋಡುವುದಕ್ಕೆ ಅವಕಾಶವಿದೆ. ಜ್ಞಾನಿ ಜ್ಞಾನವಿಧಾನದಿಂದ, ಅಜ್ಞಾನಿ ಪ್ರಪಂಚ ವಿಧಾನದಿಂದ ಅರ್ಥಮಾಡಿಕೊಳ್ಳುತ್ತಾರೆ. ನಿಮ್ಮಲ್ಲಿ ಒಬ್ಬರು ಪ್ರಪಂಚಾರ್ಥದಿಂದ ನೋಡುವುದರಿಂದ ನನ್ನ ಮಾತು ಕೆಟ್ಟದಾಗಿ ಅರ್ಥವಾಗಿದೆ. ಒಬ್ಬರು ಜ್ಞಾನಾರ್ಥ ತಿಳಿಯದಿದ್ದರೂ ನನ್ನ ಮೇಲಿರುವ ದೊಡ್ಡ ಭಾವನೆಯಿಂದ ಒಳ್ಳೆಯದಾಗಿಯೇ ಊಹಿಸಿಕೊಂಡಿದ್ದಾನೆ. ಊಹೆ ನಿಜವಾಗಬಹುದು. ಅಸತ್ಯವಾಗಬಹುದು. ಆದುದರಿಂದ ಖಚಿತವಾಗಿ ತಿಳಿದಿದೆಯೆಂದು ಹೇಳಲಾರೆವು. ಮತ್ತೊಬ್ಬರಿಗೆ ತಲೆ ತುಂಡುಗಳಾಗಿ ಹೋಗುವಂತೆ ಶಪಿಸಿದ್ದೇನೆಂದು ಅರ್ಥವಾಗಿದೆ. ಆ ವಿಧವಾಗಿ ಅರ್ಥವಾಗುವುದರಿಂದ ಜ್ಞಾನಕ್ಕೇ ದೂರವಾಗುವ ಅವಕಾಶವಿದೆ. ಒಬ್ಬರಿಗೆ ಆಶೀರ್ವಾದವೇನೊಯೆಂದು ಮತ್ತೊಬ್ಬರಿಗೆ ದೂಷಣೆಯಾಗಿ ಅರ್ಥವಾಗುವುದಕ್ಕೆ ಪೂರ್ವದಲ್ಲಿರುವ ಜ್ಞಾನ ಈದಿನ ಇಲ್ಲದಿರುವುದಕ್ಕೆ ಕಾರಣ. ಪೂರ್ವದಲ್ಲಿ **"ನಿನ್ನ ತಲೆಹಣ್ಣು ಹೊಡೆಯಲಿ"** ಎನ್ನುವ ಮಾತು ಸಂಪೂರ್ಣ ಆಶೀರ್ವಾದವಾಗಿ ಇರುತ್ತಿತ್ತು. ಈ ವಾಕ್ಯ ಆಶೀರ್ವಾದವಾಗಿ ಹೇಗಿರುತ್ತಿತ್ತೊ ವಿವರಿಸಿ ತಿಳಿಸುತ್ತೇನೆ. ಹಣ್ಣು ಎಂದರೆ ತಿನ್ನುವುದಕ್ಕೆ ಪರಿಪಕ್ವಕ್ಕೆ ಬಂದಿರುವ ಫಲ ಎಂದು ಅರ್ಥ. ಹಣ್ಣಿನಲ್ಲಿ ತಿಂದು ಅನುಭವಿಸುವುದಕ್ಕೆ ಬೇಕಾದ ಪದಾರ್ಥ ಕಾಣಿಸದೆ ನೆಲೆಗೊಂಡಿರುತ್ತದೆ. ಹಾಗೆಯೇ ತಲೆಯಲ್ಲಿ ಕಣ್ಣಿಗೆ ತಿಳಿಯದಂತೆ ಕರ್ಮವೆಂಬ ಪದಾರ್ಥ ಅನುಭವಿಸುವುದಕ್ಕೆ ತಯಾರಾಗಿದೆ ಎನ್ನುವ ಭಾವನೆಯಿಂದ ಕರ್ಮವನ್ನು ತಲೆಹಣ್ಣು ಎನ್ನುತ್ತಿದ್ದರು. ಒಂದು ಹಣ್ಣು ಅಚ್ಚಳಿಯದಂತೆ ಮತ್ತು ಶುಭ್ರವಾಗಿ ಇರುವಾಗ ತಿನ್ನುವುದಕ್ಕೆ ಯೋಗ್ಯವಾಗಿ ಇರುತ್ತದೆ. ಹಣ್ಣಿಗೆ ರಂಧ್ರಗಳು ಬಿದ್ದು, ಅಥವಾ ಹಣ್ಣು ಸೀಳಿಹೋಗಿ ಅದರೊಳಗೆ

ಧೂಳು ಹೋಗಿ, ಕ್ರಿಮಿಕೀಟಕಗಳು ಸೇರಿದಾಗ ತಿನ್ನುವುದಕ್ಕೆ ಯೋಗ್ಯವಾಗಿ ಇಲ್ಲದೇ ವೃಥಾ ಆಗುತ್ತದೆ. ಹಾಗೆಯೇ ಕರ್ಮಫಲ ಕೂಡ ಜ್ಞಾನವೆನ್ನುವ ಹುಳದಿಂದ ಕೆಟ್ಟುಹೋದಾಗ, ಗುರು ಆಶೀರ್ವಾದ ಎನ್ನುವ ಸೀಳಿಕೆ ಏರ್ಪಟ್ಟಾಗ ಅದು ಕೆಟ್ಟುಹೋಗಿ ಕರ್ಮಫಲ ಅನುಭವಿಸುವುದಕ್ಕೆ ಯೋಗ್ಯವಾಗಿ ಇಲ್ಲದಂತೆ ಹೋಗುತ್ತದೆ. ಕರ್ಮಫಲ ಇಲ್ಲದಿರುವಾಗ ಮಾನವನಿಗೆ ಮುಕ್ತಿ ಲಭಿಸುತ್ತದೆಂದು ತಿಳಿದ ಹಿರಿಯರು ತಮಗೆ ಪ್ರಿಯವಾದ ಜ್ಞಾನ ಶಿಷ್ಯರನ್ನು **"ನಿನ್ನ ತಲೆಹಣ್ಣು ಹೊಡೆಯಲಿ"** ಎಂದು ಆಶೀರ್ವಾದಿಸುತ್ತಿದ್ದರು. ಕರ್ಮ ಎನ್ನುವ ಹಣ್ಣು ಹೊಡೆದುಹೋಗಿ ನಶಿಸಿಹೋಗಬೇಕೆಂದು, ಅದರಿಂದ ಮುಕ್ತಿ ಉಂಟಾ ಗುತ್ತದೆನ್ನುವುದು ಒಳ್ಳೆಯ ಶುಭವಾದ ಉದ್ದೇಶ, ಆದ್ದರಿಂದ ಈ ಮಾತನ್ನು ಆಶೀರ್ವಾದ ಎನ್ನುವುದು ಸಮಂಜಸ. ಅಜ್ಞಾನದಿಂದ ಅರ್ಥಮಾಡಿಕೊಳ್ಳದೆ ಅಶುಭವಾದ ಬೈಗಳಾಗಿ ಹೇಳಿಕೊಳ್ಳುವುದು ಅಸಮಂಜಸ. ಪ್ರತಿ ಮಾತನ್ನು ಜ್ಞಾನವಿವರವಾಗಿ ಯೋಚಿಸಿದಾಗಲೇ ಅದರಲ್ಲಿನ ಸಾರಾಂಶ ಅರ್ಥವಾಗುತ್ತದೆ." ಎಂದು ಹೇಳಿದ ಜಂಬುಕೇಶ್ವರನು ಆಶೀರ್ವಾದವನ್ನು ದೂಷಣೆಯಾಗಿ ಅರ್ಥಮಾಡಿಕೊಂಡು ಚಿಕ್ಕ ಶಿಷ್ಯನನ್ನು ಕುರಿತು ಯೋಚಿಸಿ ಆತನಲ್ಲಿ ಇನ್ನೂ ಜ್ಞಾನ ವೃದ್ಧಿ ಆಗಬೇಕಾಗಿದೆಯೆಂದು ಅಂದುಕೊಂಡಿದ್ದಾನೆ. ಆತನಿಗೂ ಕೂಡ ಜ್ಞಾನ ಸಂಪೂರ್ಣವಾಗಿ ಉಂಟಾಗಿ ಜ್ಞಾನದಲ್ಲಿನ ಸೂಕ್ಷ್ಮವಾದ ಅರ್ಥಗಳನ್ನು ಗ್ರಹಿಸುವಂತೆ ಮಾಡಬೇಕೆಂದುಕೊಂಡಿದ್ದಾನೆ.

# ನಿನ್ನ ಶಿರಸ್ಸಿನಲ್ಲಿ ದೀಪಬೆಳಗಲಿ

ಗುರುಗಳು ಜ್ಞಾನಬೋಧನೆಗಳು ಮಾಡುತ್ತಾ ಸ್ವಲ್ಪಕಾಲ ಕಳೆದಿದ್ದಾನೆ. ಅಲ್ಲಿಗೆ ಸ್ವಲ್ಪ ಜ್ಞಾನಲೋಪ ಇದೆಯೆಂದು ಗ್ರಹಿಸಿದ ಜಂಬುಕೇಶ್ವರನು ಒಂದು ಶುಭ ಸಮಯದಲ್ಲಿ ಚಿಕ್ಕ ಶಿಷ್ಯನಿಗು ಕೂಡ ಒಂದು ಆಶೀರ್ವಾದ ಕೊಟ್ಟಿದ್ದಾನೆ. ಅದು **"ನಿನ್ನ ಶಿರಸ್ಸಿನಲ್ಲಿ ದೀಪಬೆಳಗಲಿ"** ಇದು ಜ್ಞಾನಪರವಾದ ಆಶೀರ್ವಾದ ಅದರೂ ಅಜ್ಞಾನ ಅರ್ಥದಿಂದ ದೂಷಣೆಯಾಗಿ ಲೆಕ್ಕಿಸಲ್ಪಡುತ್ತಿದೆ. ಒಂದು

ಮನೆಯಲ್ಲಿ ಯಾರಾದರೂ ಮರಣಿಸಿದಾಗ ಶವದ ತಲೆಯ ಹತ್ತಿರ ದೀಪ ಇಡುವುದು ಒಂದು ಸಂಪ್ರದಾಯವಾಗಿ ನಡೆಯುತ್ತಿದೆ. ನಿನ್ನ ಶಿರಸ್ಸಿನಲ್ಲಿ ದೀಪಬೆಳಗಲಿ ಎನ್ನುತ್ತಲೇ ನಿಮ್ಮ ಮನೆಯಲ್ಲಿ ಯಾರೊ ಒಬ್ಬರು ಮರಣಿಸಬೇಕೆಂದು ದೂಷಿಸಿದಂತೆ ಅರ್ಥವಾಗುವುದರಿಂದ ಮೇಲಿನ ಆಶೀರ್ವಾದವನ್ನು ಜ್ಞಾನ ತಿಳಿಯದವರು ದೂಷಣೆಯಾಗಿಯೇ ಲೆಕ್ಕಿಸುತ್ತಾರೆ. ಜ್ಞಾನಾರ್ಥದಿಂದ ನೋಡಿದಂತಾದರೆ ಈ ವಿಧವಾಗಿದೆ.

ಜ್ಞಾನಹೊಂದಿ ಅದರಪ್ರಕಾರ ಆಚರಿಸಿದಾಗ ಜ್ಞಾನಾಗ್ನಿ ಮಾನವನಲ್ಲಿ ಉತ್ಪತ್ತಿ ಆಗುತ್ತದೆ. ಜೀವಿಯು ಜನ್ಮಿಸುವುದಕ್ಕೆ ಜನ್ಮಿಸಿ ಕಷ್ಟ ಸುಖಗಳನ್ನು ಅನುಭವಿಸುವುದಕ್ಕೆ ಕಾರಣವಾದ ಕರ್ಮವನ್ನು ಜ್ಞಾನಾಗ್ನಿಯೇ ಸುಟ್ಟುಹಾಕುತ್ತದೆ. ಮಾನವನು ಜನ್ಮಕರ್ಮಗಳಿಂದ ಹೊರಬೀಳಬೇಕೆಂದರೆ ಅದು ಜ್ಞಾನಾಗ್ನಿಯಿಂದಲೇ ಸಾಧ್ಯವಾಗುತ್ತದೆ. ಪಾಪಪುಣ್ಯಗಳೆನ್ನುವ ಕರ್ಮವನ್ನು ಸುಟ್ಟುಹಾಕುವುದಕ್ಕೆ ಒಂದು ಜ್ಞಾನಾಗ್ನಿ ಹೊರತು ಪ್ರಪಂಚದಲ್ಲಿ ಬೇರೇನು ಇಲ್ಲ. ಆದ್ದರಿಂದ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ 37ನೇ ಶ್ಲೋಕದಲ್ಲಿ **"ಯಥೈಧಾಂಸಿ ಸಮಿದ್ಧೋಗ್ನಿರ್ಭಸ್ಮ ಸಾತ್ಕುರು ತೇರ್ಜುನ, ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮಸಾತ್ಕುರುತೇ ತಥಾ"** ಎಂದು ಶ್ರೀಕೃಷ್ಣ ಭಗವಾನನು ಕೂಡ ಹೇಳಿದ್ದಾನೆ. ಕಟ್ಟಿಗೆಗಳನ್ನು ಸುಡುವುದಕ್ಕೆ ಒಂದು ಅಗ್ನಿಗೆ ಸಾಧ್ಯವಾದಂತೆ ಕರ್ಮವನ್ನು ಸುಡುವುದಕ್ಕೆ ಒಂದು ಜ್ಞಾನಾಗ್ನಿಗೇ ಸಾಧ್ಯವಾಗುತ್ತದೆ. ಮಾನವನಿಗೆ ತಲೆ ಭಾಗದಲ್ಲಿರುವ ಕರ್ಮಚಕ್ರದಲ್ಲಿ ಕರ್ಮ ನೆಲೆಗೊಂಡಿರುತ್ತದೆ. ಕರ್ಮ ನಿಲಯ ಎಲ್ಲಿದೆಯೊ ಅಲ್ಲಿಯೇ ಜ್ಞಾನಾಗ್ನಿ ಕೂಡ ಇದ್ದು ಕರ್ಮವನ್ನು ಸುಡುತ್ತದೆ. ಆದ್ದರಿಂದ ಜ್ಞಾನಾಗ್ನಿ ಕೂಡ ತಲೆಯಲ್ಲಿರುವ ಕರ್ಮಚಕ್ರ ಹತ್ತಿರವೇ ನಿವಾಸವಿರುತ್ತದೆ. ಆದ್ದರಿಂದಲೇ ದೊಡ್ಡ ಯೋಗಿಗಳ ಮತ್ತು ದೇವತೆಗಳ ತಲೆ ಹಿಂಬದಿಯ ಭಾಗದಲ್ಲಿ ಪ್ರಕಾಶವಿರುವಂತೆ ಚಿತ್ರಿಸಿದ ಎಷ್ಟೋ ಚಿತ್ರಪಟಗಳನ್ನು ನಾವು ನೋಡುತ್ತಿದ್ದೇವೆ. ಕರ್ಮವನ್ನು ಸುಡುವ ಜ್ಞಾನಾಗ್ನಿಯನ್ನು ಸಂಪಾದಿಸಿಕೊಳ್ಳಿರೆಂದು, ಹಾಗೆ ಸಂಪಾದಿಸಿಕೊಂಡಾಗ ಮಾತ್ರವೇ ಕರ್ಮ

ನಾಶವಾಗಿ ಮೋಕ್ಷ ಹೊಂದುತ್ತೀರೆಂದು ಹಿರಿಯರು ಕೂಡ ತಿಳಿಸುತ್ತಿದ್ದಾರೆ. ಈ ವಿಧಾನವನ್ನು ಅನುಸರಿಯೇ ತಮ್ಮ ಶಿಷ್ಯನಿಗೆ ಜ್ಞಾನ ಸಂಪೂರ್ಣವಾಗಿ ಉಂಟಾಗಬೇಕೆಂದು, ಜ್ಞಾನಾಗ್ನಿ ಶಿರಸ್ಸಿನಲ್ಲಿ ಬೆಳಗಬೇಕೆಂದು, ಜಂಬುಕೇಶ್ವರನು ತಿಳಿದು ತನ್ನ ಪಾದಗಳಿಗೆ ನಮಸ್ಕರಿಸುವಾಗ **'ನಿನ್ನ ಶಿರಸ್ಸಿನಲ್ಲಿ ದೀಪಬೆಳಗಲಿ"** ಎಂದು ಆಶೀರ್ವಾದಿಸಿದ್ದಾನೆ. ಜ್ಞಾನದೀಪ ತಲೆಯಲ್ಲಿ ಪ್ರಕಾಶಿಸಿ ಅಜ್ಞಾನ ತೊಲಗಿ ಕರ್ಮಸುಟ್ಟು ಹೋಗುಬೇಕೆಂದು ಅಂದಿನ ಅವರ ಭಾವನೆ. ಆದರೆ ಈದಿನ ಅದು ಬೈಗುಳಾಗಿ ಪರಿಗಣಿಸಲ್ಪಡುತ್ತಿವೆ. ಹೆಂಗಸರು ಕೆಲವರು ಹಳ್ಳಿ ಪ್ರಾಂತ್ಯಗಳಲ್ಲಿ ಈ ವಾಕ್ಯವನ್ನು ಬೈಗಳಾಗಿ ಈದಿನಕ್ಕು ಬಳಸುತ್ತಿದ್ದಾರೆ. ಬೈಗುಳಾಗಿ ಬಳಸುತ್ತಿರುವ ಬಹಳ ವಾಕ್ಯಗಳು ಜ್ಞಾನ ಸಂಬಂಧವಾದವುಗಳೆಂದು ಬಹಳ ಜನರಿಗೆ ತಿಳಿಯದೇ ಹೋಗಿದೆ.

# ನಿನ್ನ ಪಾಪ ಹರಿಯಲಿ(ಕಳಚಲಿ)

ಹೀಗೆ ಎಷ್ಟೋ ಆಶೀರ್ವಾದದ ವಾಕ್ಯಗಳು ದೂಷಣೆಗಳಾಗಿ ಬದಲಾಗಿರುವ ಈ ಕಾಲದಲ್ಲಿ ಕೂಡ ಒಂದೇವೊಂದು ಆಶೀರ್ವಾದ ಬೈಗಳಾಗಲ್ಲದೆ ದೂಷಣೆಯಾಗಲ್ಲದೆ ಮಧ್ಯದಲ್ಲಿ ಉಳಿದುಹೋಗಿದೆ. **"ನಿನ್ನ ಪಾಪ ಹರಿಯ"** ಎನ್ನುವ ವಾಕ್ಯ ಸ್ವಚ್ಛವಾದ ಆಶೀರ್ವಾದ ಆದರೂ ಅದು ರೂಢಿ ಪದವಾಗಿ ಉಳಿದುಹೋಗಿದೆ. ಈಗಲೂ ಕೆಲವು ಹಳ್ಳಿ ಪ್ರಾಂತ್ಯಗಳಲ್ಲಿ ಕೆಲವು ಪ್ರಾಂತೀಯ ಭಾಷೆಗಳಲ್ಲಿ ನಿನ್ನ ಪಾಪ ಹರಿಯಲಿ" ಎಂದೂ, ಅದೇ ಪದವನ್ನೇ **"ನಿನ್ನ ಪಾಸುಕೂಲ"** ಎಂದೂ ಕರೆಯುವುದನ್ನು ಕೇಳುತ್ತಿದ್ದೇವೆ. ಇದಕ್ಕು ಮೊದಲು ಹೇಳಿದ ಏಳು ಆಶೀರ್ವಾದಗಳನ್ನು ಹೆಚ್ಚಾಗಿ ಹೆಂಗಸರೇ ಬೈಗುಳ ರೂಪದಲ್ಲಿ ಉಪಯೋಗಿಸುತ್ತಿರುವಾಗ, ನಿನ್ನ ಪಾಪ ಹರಿಯಲಿ ಎನ್ನುವ ವಾಕ್ಯವನ್ನು ಗಂಡಸರೇ ಹೆಚ್ಚಾಗಿ ಬಳಸುತ್ತಿದ್ದಾರೆ. ಪೂರ್ವ ಗುರುಗಳು, ಸ್ವಾಮಿಗಳು, ಮಹರ್ಷಿಗಳು ತನ್ನ ಶಿಷ್ಯರನ್ನು, ಭಕ್ತರನ್ನು ಪಾಪದಿಂದ ವಿಮುಕ್ತಿ ಗೊಳಿಸಲು ಬಳಸಿದ ಆಶೀರ್ವಾದವೇ **"ನಿನ್ನ ಪಾಪ ಹರಿಯಲಿ"** ಎನ್ನುವ

ಮಾತು. ನಿನ್ನ ಪಾಪ ಕೂಲಲಿ ಎನ್ನುವ ಮಾತು ಕಾಲಕ್ರಮೇಣ **ನಿನ್ನ ಪಾಸುಕೂಲ** ಎನ್ನುವ ಮಾತಿನಂತೆ ಕೂಡ ಬದಲಾಗಿಹೋಗಿದೆ.

# ನನ್ನ ಚವತಿ (ಸವತಿ)

ಒಬ್ಬ ಗಂಡನಿಗೆ ಇಬ್ಬರು ಹೆಂಡತಿಯರಿರುವಾಗ ಮೊದಲ ಹೆಂಡತಿ, ಎರಡನೆ ಹೆಂಡತಿಯನ್ನು ನನ್ನ ಚವತಿ ಎಂದು ಅನ್ನುತ್ತಾಳೆ. ಹಾಗೆಯೇ ಎರಡನೆ ಹೆಂಡತಿ, ಮೊದಲ ಹೆಂಡತಿಯನ್ನು ನನ್ನ ಚವತಿ ಎಂದು ಅನ್ನುತ್ತಾಳೆ. ಈ ವಿಧವಾಗಿ ಇಬ್ಬರು ಹೆಂಡತಿಯರು ಅಥವಾ ಹೆಚ್ಚಾಗಿ ಹೆಂಡತಿಯರಿರುವ ಕಡೆ ಹೆಂಡತಿಯರೆಲ್ಲರೂ ಒಬ್ಬರಿಗೊಬ್ಬರು ಚವತಿ, ನನ್ನ ಚವತಿ ಎಂದುಕೊಳ್ಳುವುದು ಪರಿಪಾಟವಾಗಿದೆ. ಇಲ್ಲಿ ಒಂದು ವಿಶೇಷವೇನೆಂದರೆ ಹೆಂಡತಿಯರೆಲ್ಲರೂ ಒಬ್ಬರಿಗೊಬ್ಬರು ಪ್ರೀತಿಯಿಂದಿರುವ ಸಮಯದಲ್ಲಿ ಅಕ್ಕ, ತಂಗಿ ಎಂದು ಚಿಕ್ಕವರು ದೊಡ್ಡವರನ್ನು ಅನುಸರಿಸಿ ಪ್ರೀತಿಯಿಂದ ಕರೆದುಕೊಳ್ಳುತ್ತಾರೆ. ಒಂದುವೇಳೆ ಅವರ ಮಧ್ಯದಲ್ಲಿ ವೈಷಮ್ಯಗಳು, ಅಭಿಪ್ರಾಯ ಬೇಧಗಳು ಇರುವಾಗ ಅವರ ನಡುವೆ ಪ್ರೀತಿ ಇರುವುದಿಲ್ಲ. ಒಬ್ಬರಿಗೊಬ್ಬರು ಅಸೂಯೆ ಹೊಂದಿರುತ್ತಾರೆ. ಅಂತಹ ಸಮಯಗಳಲ್ಲಿ ಆಕೆ ನನಗೆ ಅಕ್ಕ ಎಂದಾಗಲಿ, ಈಕೆ ನನಗೆ ತಂಗಿ ಎಂದಾಗಲಿ ಹೇಳಿಕೊಳ್ಳುವುದಿಲ್ಲ. ಅವಳು ನನ್ನ ಚವತಿ ಎಂದು, ಇವಳು ನನ್ನ ಚವತಿ ಎಂದು ಕರೆಯುತ್ತಿರುತ್ತಾರೆ. ಇನ್ನೂ ಕೆಲವರು ಹೊಡೆದಾಡುಕೊಳ್ಳುವ ಸಮಯದಲ್ಲಿ ನೀನು ನನ್ನ ಚವತಿಯೇ ಎಂದೊ, ಅಥವಾ ನನ್ನ ಚವತಿ ಎಂದು ಬೈಯ್ದುಕೊಳ್ಳುತ್ತಿರುತ್ತಾರೆ. ಈ ವಿಧವಾಗಿ "ನನ್ನ ಚವತಿ" ಎನ್ನುವ ಮಾತು ಬೈಗಳ ಸಾಲಿನೊಳಗೆ ಸೇರಿಹೋಗಿದೆ.

ಪೂರ್ವದಲ್ಲಿ ಕೃತಯುಗ, ತ್ರೇತಾಯುಗಗಳಲ್ಲಿ **"ನನ್ನ ಚವತಿ"** ಎನ್ನುವ ಮಾತು ದೊಡ್ಡ ಜ್ಞಾನದಿಂದ ಕೂಡಿಕೊಂಡಿರುತ್ತಿತ್ತು. ಪೂರ್ವದಲ್ಲಿ ದೈವಜ್ಞಾನವಾಗಿ ಇರುವಮಾತು ಈ ಕಾಲದಲ್ಲಿ ಬೈಗುಳಾಗಿ ಬದಲಾಗಿಹೋಗಿದೆ. ಆದ್ದರಿಂದ ಬೈಗುಳಲ್ಲಿ ಜ್ಞಾನವಿದೆಯೆಂದು ನಾವು ಈ ದಿನ ಹೇಳಿಕೊಳ್ಳಬೇಕಾಗಿ ಬಂದಿದೆ.

ಬೈಗುಳಜ್ಞಾನದಲ್ಲಿ ನನ್ನ ಚವತಿ ಎನ್ನುವ ಪದಕ್ಕೆ ಏನು ಜ್ಞಾನವಿದೆಯೊ ಎಂದು ಯೋಚಿಸಿದರೆ ಮತ್ತು ಆಲೋಚಿಸಿದರೆ, ಆ ರಹಸ್ಯ ಈ ವಿಧವಾಗಿ ತಿಳಿಯಲ್ಪಡುತ್ತಿದೆ. ಚಾತುರ್ವರ್ಣ್ಯಂ ಎನ್ನುವ ಪದ ಭಗವದ್ಗೀತೆ ಜ್ಞಾನಯೋಗದಲ್ಲಿ 13ನೇ ಶ್ಲೋಕದಲ್ಲಿ ಹೇಳಲ್ಪಟ್ಟಿದೆ. ಚಾತುರ್ವರ್ಣ್ಯಂ ಎನ್ನುವ ಪದದಲ್ಲಿ ಚತುರ್, ವರ್ಣಮ್ ಎನ್ನುವ ಎರಡು ಪದಗಳು ಸೇರಿ ಇವೆ. ಚತುರ್ ಎಂದರೇ ನಾಲ್ಕು ಎಂದು ಎಲ್ಲರಿಗೂ ತಿಳಿದಿದೆ. ಇನ್ನು ವರ್ಣ್ಯಂ ಎನ್ನುವ ಪದವನ್ನು ಕುರಿತು ಯೋಚಿಸಿದರೆ, ವರಸೆ ಎನ್ನುವ ಶಬ್ದದಿಂದ ವರ್ಗ, ವರ್ಣ ಎನ್ನುವ ಪದಗಳು ಏರ್ಪಟ್ಟಿವೆ. ಇವುಗಳಿಗೆಲ್ಲ ಅರ್ಥ ವರಸೆಗಳು ಎಂದರೆ ಬೇರೆಬೇರೆ ಕ್ರಮವಾಗಿ ಕಾಣಿಸುತ್ತಿವೆಯೆಂದು, ವರ್ಗಗಳು ಎಂದರೆ ಬೇರೆಬೇರೆ ಗುಂಪುಗಳೆಂದು, ವರ್ಣಗಳು ಎಂದರೇ ಬೇರೆಬೇರೆ ಬಣ್ಣಗಳೆಂದು ಹೇಳಬಹುದು. ವರ್ಣಮ್ ಎನ್ನುವ ಪದಕ್ಕೆ ಮೊದಲು ಚತುರ್ ಎಂದು ಹೇಳುವುದರಿಂದ ನಾಲ್ಕು ಬಣ್ಣಗಳೆಂದು ಹೇಳಬಹುದು. ಸಂದರ್ಭಾನುಸಾರ ಇನ್ನೂ ವಿವರವಾಗಿ ಹೇಳಿಕೊಂಡರೆ ನಾಲ್ಕು ಬೇರೆಬೇರೆ ವಿಧಗಳಾಗಿ ಇವೆಯೆಂದು ಹೇಳಬಹುದು. ಈಗ ಬೈಗುಳಾಗಿ ಹೇಳಿಕೊಳ್ಳುವ ಪದದಲ್ಲಿ "ಚವತಿ" ಎನ್ನುವ ಪದ ಇರುವುದರಿಂದ ಅದನ್ನು ಕುರಿತೇ ವಿಶೇಷವಾಗಿ ಹೇಳಿಕೊಳ್ಳಬೇಕಾಗಿದೆ. 'ವಿದಿಯ' ಎಂದರೆ ಎರಡನೆಯದೆಂದು, 'ತದಿಯ' ಎಂದರೆ ಮೂರನೆಯದೆಂದು, ಚವತಿ ಎಂದರೆ ನಾಲ್ಕನೆಯದೆಂದು ಅರ್ಥ ಮಾಡಿಕೊಳ್ಳಬಹುದು. ಮೊದಲ ಯುಗಗಳಲ್ಲಿ "ಚವತಿ " ಎನ್ನುವ ಶಬ್ದ ಆತ್ಮಜ್ಞಾನ ಹೊಂದಿರುವುದಾಗಿ ಇರುವುದರಿಂದ ವಿವರ ಹೀಗಿದೆ.

ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ ಮೊಟ್ಟಮೊದಲ ಶ್ಲೋಕದಲ್ಲಿ ಮೊದಲಿನಲ್ಲಿಯೇ **"ಊರ್ಧ್ವಮೂಲಮ್"** ಎನ್ನುವ ಪದವಿದೆ. ಜೀವನಕ್ಕಿರುವ ಮೂಲ ಶರೀರಕ್ಕೆ ಮೇಲೆ ಇರುವ ತಲೆಯಲ್ಲಿದೆಯೆಂದು, ಆ ಪದಕ್ಕೆ ಅರ್ಥ. ಶರೀರಕ್ಕೆ ಮೇಲೆ ಶಿರಸ್ಸು ಇದೆ. ಆ ಶಿರಸ್ಸಿನೊಳಗೆ ಕಾಣಿಸುವ ಮೆದುಳಿನಲ್ಲಿ ಕಾಣಿಸದ ಮೂಲವಿದೆಯೆಂದು ಭಗವಂತನು ಹೇಳಿದ್ದಾನೆ. ಇತ್ತ

ಭೌತಿಕಶಾಸ್ತ್ರಜ್ಞರಿಗು, ಅತ್ತ ವಿಜ್ಞಾನಿಗಳಿಗು ತಲೆಯಲ್ಲಿ ಕಾಣಿಸುವ ಮೆದುಳಿದೆ ಯೆಂದು ತಿಳಿದಿದೆ, ಆದರೆ ಕಾಣಿಸದ ಮೂಲವೇನೊ ತಿಳಿದಿಲ್ಲ. ಆ ಮೂಲವನ್ನೇ ಭಗವದ್ಗೀತೆ ಜ್ಞಾನಯೋಗದಲ್ಲಿ 13ನೇ ಶ್ಲೋಕದಲ್ಲಿ **"ಚಾತುರ್ವರ್ಣಂ"** ಎಂದು ಹೇಳಿದ್ದಾನೆ. ಶಿರಸ್ಸು ಮಧ್ಯಭಾಗದಲ್ಲಿ ಕಣ್ಣುಬ್ಬುಗಳ ಮಧ್ಯಭಾಗದಿಂದ ಸುಮಾರು ಒಂದರಿಂದ ಒಂದುಕಾಲು ಅಂಗುಲ ಉದ್ದದಿಂದ ನಾಲ್ಕು ಚಕ್ರಗಳು ಬ್ರಹ್ಮನಾಡಿ ಶಕ್ತಿಯನ್ನು ಆಧಾರವಾಗಿ ಮಾಡಿಕೊಂಡು ತಿರುಗುತ್ತಿವೆ. ಆ ನಾಲ್ಕು ಚಕ್ರಗಳಲ್ಲಿ ಕೆಳಗಿನ ಚಕ್ರವಾದ ಗುಣಚಕ್ರ ಬ್ರಹ್ಮನಾಡಿಯಲ್ಲಿ ಆರನೆ ನಾಡೀಕೇಂದ್ರವಾದ ಅಗ್ನೇಯಸ್ಥಾನದಲ್ಲಿ ಇದೆ. ಅಗ್ನೇಯ ನಾಡೀಕೇಂದ್ರ ಮೆದುಳಿನ ಮಧ್ಯದಲ್ಲಿ ಅಂದರೆ ಕಣ್ಣುಬ್ಬುಗಳ ಮಧ್ಯದಲ್ಲಿದೆ. ಮೇಲಿನ ಚಕ್ರವಾದ ಬ್ರಹ್ಮಚಕ್ರ, ಮೆದುಳು ಮೇಲ್ಭಾಗವಾದ ಸಹಸ್ರಾರ ನಾಡೀಕೇಂದ್ರದಲ್ಲಿ ಇದೆ. ಉಳಿದ ಎರಡು ಚಕ್ರಗಳಾದ ಕರ್ಮಚಕ್ರ, ಕಾಲಚಕ್ರಗಳು ಅಗ್ನೇಯ ಕೇಂದ್ರಕ್ಕೆ, ಸಹಾಸ್ರಾರ ಕೇಂದ್ರಕ್ಕೆ ಮಧ್ಯದಲ್ಲಿ ಇವೆ. ಜ್ಞಾನನೇತ್ರಕ್ಕೆ ತಿಳಿಯಲ್ಪಡುವ ಆ ಚಿತ್ರ ಈ ವಿಧವಾಗಿ ಇದೆ. ಕೆಳಗೆ ಚಿತ್ರದಲ್ಲಿ ನೋಡಿರಿ.

ಮನುಷ್ಯನ ಮೆದುಳಿನಲ್ಲಿರುವ ಗುಣ, ಕರ್ಮ, ಕಾಲ, ಬ್ರಹ್ಮಚಕ್ರಗಳೆನ್ನುವ ನಾಲ್ಕುಚಕ್ರಗಳಲ್ಲಿ ಕೆಳಗಿನ ಚಕ್ರ ಗುಣಚಕ್ರ. ಆ ಗುಣಚಕ್ರವನ್ನು ವಿವರಿಸಿಕೊಂಡು ನೋಡಿದರೆ, ಅದರಲ್ಲಿ ಗುಣಗಳಿರುವ ಭಾಗಗಳು ಮೂರು, ಗುಣಗಳಿಲ್ಲದ ಭಾಗ ಒಂದು ಇದೆ. ಒಟ್ಟು ನಾಲ್ಕು ಕೋಣೆಗಳಾಗಿ ಗುಣಚಕ್ರ ವಿಭಜಿಸಲ್ಪಟ್ಟಿದೆ.





ಅದರಲ್ಲಿ ಹೊರಗಿನಿಂದ ಒಳಗೆ ಮೊದಲನೆಯದು ತಾಮಸ ಗುಣಭಾಗ, ಎರಡನೆಯದು ರಾಜಸ ಗುಣಭಾಗ, ಮೂರನೆಯದು ಸಾತ್ತ್ವಿಕ ಗುಣಭಾಗ, ನಾಲ್ಕನೆಯದು ಗುಣವಿಲ್ಲದ ಆತ್ಮ ಭಾಗ. ಭೂಮಿಮೇಲೆ ಹುಟ್ಟಿದ ಜೀವಾತ್ಮ ಯಾರಾದರಾಗಲಿ ಈ ನಾಲ್ಕು ಭಾಗಗಳಲ್ಲಿಯೇ ಇರುತ್ತಾನೆ. ಮೊದಲ ಭಾಗದಲ್ಲಿರುವ ಜೀವಿಯನ್ನು ಆ ಗುಣಭಾಗವನ್ನನುಸರಿಸಿ ತಾಮಸನೆಂದು, ಎರಡನೆ ಭಾಗದಲ್ಲಿರುವ ಜೀವಿಯನ್ನು ರಾಜಸನೆಂದು, ಮೂರನೆ ಭಾಗದಲ್ಲಿರುವ ಜೀವಿಯನ್ನು ಸಾತ್ತ್ವಿಕನೆಂದು, ನಾಲ್ಕನೆ ಭಾಗದಲ್ಲಿರುವವನನ್ನು ಯೋಗಿ ಎಂದು ಕರೆಯುತ್ತಾರೆ. ಮೊದಲ ಮೂರು ಭಾಗಗಳಲ್ಲಿ ಗುಣಗಳಿರುವಾಗ, ಕೊನೆಯ ನಾಲ್ಕನೆ ಭಾಗದಲ್ಲಿ ಆತ್ಮ ಇದೆ. ಆದ್ದರಿಂದ ಆತ್ಮಸ್ಥಾನದಲ್ಲಿ ಸೇರಿನ ಜೀವಿಯನ್ನು ಯೋಗಿ ಎಂದು ಕರೆಯುತ್ತಿದ್ದೇವೆ. ಗುಣಚಕ್ರ ನಾಲ್ಕು ಭಾಗಗಳನ್ನು ಕೆಳಗಿನ ಚಿತ್ರಗಳಲ್ಲಿ ನೋಡಿರಿ.

ಯೋಗಿ ಆದವನು ಗುಣಚಕ್ರದಲ್ಲಿನ ನಾಲ್ಕನೆ ಸ್ಥಾನದಲ್ಲಿ ಇರುತ್ತಾನೆ. ಆದ್ದರಿಂದ ಅವನನ್ನು ನಾಲ್ಕನೆಯವನೆಂದು, ಚವತಿ ಎಂದು ಕರೆಯುವುದು ಪೂರ್ವದಲ್ಲಿತ್ತು. ಪ್ರಥಮ (ಪಾಡ್ಯ), ದ್ವಿತೀಯ (ವಿದಿಯ), ತೃತೀಯ (ತದಿಯ), ಚತುರ್ಥಿ (ಚವಿತಿ) ಎನ್ನುವ ನಾಲ್ಕು ಹೆಸರುಗಳು ಕ್ರಮವಾಗಿ ತಾಮಸ, ರಾಜಸ, ಸಾತ್ತ್ವಿಕ, ಯೋಗಿಗಳಿಗೆ ಅನ್ವಯಿಸುತ್ತಿದ್ದವು. ಗುಣಚಕ್ರದಲ್ಲಿ ಮೊದಲು ತಾಮಸನು






**ಗುಣಚಕ್ರದಲ್ಲಿನ ಜೀವಿಗಳು(ಜೀವಾತ್ಮಗಳು)**

ಅಜ್ಞಾನಿ, ಆದುದರಿಂದ ಅವನನ್ನು ಮೌಢ್ಯ ಇರುವವನೆಂದು ಕರೆಯುತ್ತಿದ್ದರು. ಮೌಢ್ಯ ಎನ್ನುವ ಪದ ಹೇಗೆ ಬಂದಿದೆ ಎಂದರೆ? ಪ್ರಥಮ ಎನ್ನುವ ಶಬ್ದ ಪಾಡ್ಯಮಿ ಎನ್ನುವ ಶಬ್ದವಾಗಿ ಬದಲಾಗಿದೆ. ನಂತರ ಪಾಡ್ಯಮಿ ಎನ್ನು ಶಬ್ದ ಮೌಢ್ಯ ಎನ್ನುವ ಶಬ್ದವಾಗಿ ಬದಲಾಗಿಹೋಗಿದೆ. ಮೌಢ್ಯ ಎಂದರೆ ಅಜ್ಞಾನ ಎಂದು ಅರ್ಥ. ಪಂಚಾಂಗದಲ್ಲಿನ ಹದಿನೈದು ತಿಥಿಗಳಲ್ಲಿ ಮೊದಲನೆಯದು ಪಾಡ್ಯಮಿ, ಕೊನೆಯದು ಪೌರ್ಣಮಿ. ಪಾಡ್ಯಮಿ ಅಜ್ಞಾನಕ್ಕೆ ಗುರುತು. ಪೌರ್ಣಮಿ ಸಂಪೂರ್ಣ ಜ್ಞಾನಕ್ಕೆ ಗುರುತು. ತಿಥಿಗಳಲ್ಲಿ ಪಾಡ್ಯಮಿಯಾಗಿ ಇರುವುದೇ ಮನುಷ್ಯರಲ್ಲಿ ಮೌಢ್ಯವಾಗಿ ಇದೆ.

ಗುಣಚಕ್ರದಲ್ಲಿನ ಒಳಗಿನ ನಾಲ್ಕನೆ ಭಾಗದಲ್ಲಿ ಜೀವಿಯಿದ್ದರೆ ಯೋಗಿ ಆಗುತ್ತಾನೆ. ಅಂತಹ ಯೋಗಿಯನ್ನು ಪೂರ್ವದಲ್ಲಿ ಜ್ಞಾನ ತಿಳಿದವರು ನಾಲ್ಕನೆಯವನಾಗಿ ಗುರುತಿಸಿ ಚವತಿ ಎಂದು ಸಂಬೋಧಿಸಿ ಕರೆಯುತ್ತಿದ್ದರು. ಉಳಿದ ಮೂರು ಗುಣಗಳಲ್ಲಿನ ಮನುಷ್ಯರು ಯಾರಾದರೂ ಎದುರಿಗಿರುವವನನ್ನು ಗೌರವಿಸುತ್ತಾ ಅವನು ಯೋಗಿ ಅಲ್ಲದಿದ್ದರೂ, ಅವನಿಗೆ ಗೌರವ ಪ್ರಥವಾಗಿ ಯೋಗಿಯೊಂದರ ಗೌರವಕೊಟ್ಟು ಚವತಿ ಎನ್ನುತ್ತಿದ್ದರು. ಈ ವಿಧವಾಗಿ ಯೋಗಿಗಳನ್ನಾದರೂ, ಯೋಗಿಗಳಿಗೆ ಸಮಾನವಾದವರನ್ನಾದರೂ, ಗೌರವವಾಗಿ ಮಾತನಾಡಿಸುತ್ತಾ ನನ್ನ ಚವತಿ ಚೆನ್ನಾಗಿದ್ದೀಯಾ ಎಂದು ಅನ್ನುತ್ತಿದ್ದರು. ತಾಮಸನಾಗಲಿ, ರಾಜಸನಾಗಲಿ, ಸಾತ್ತ್ವಿಕನಾಗಲಿ ಮೂರು ವಿಧದವರು ಯೋಗಸ್ಥಾನದಲ್ಲಿನವನನ್ನು 'ಚವತಿ' ಎನ್ನುವುದು ಅಂದಿನ ಜ್ಞಾನದಮಾತು. ಈದಿನ, ಅಂದಿನ ಜ್ಞಾನ ತಿಳಿಯದಿರುವುದರಿಂದ ಆ ಮಾತನ್ನು ದೂಷಣೆಯಾಗಿ ವಿನಿಯೋಗಿಸುತ್ತಿದ್ದಾರೆ. ಅದು ಈದಿನ ಬೈಗಳಾಗಿ ಇದ್ದರೂ, ವಿವರಿಸಿಕೊಂಡು ನೋಡಿದರೆ ಅದರಲ್ಲಿ ಜ್ಞಾನವಿದೆ. ಅದನ್ನು ಬೈಗಳ ಜ್ಞಾನವಾಗಿ ನಾವು ಹೇಳಿಕೊಳ್ಳುತ್ತಿದ್ದೇವೆ.

ಇನ್ನೂ ಸ್ವಲ್ಪ ವಿವರವಾಗಿ ಹೇಳಿಕೊಂಡರೆ ನಾಲ್ಕನೆ ಸ್ಥಾನವಾದ ಆತ್ಮ ಸ್ಥಾನದಲ್ಲಿ ಇರುವವನಿಗೆ ಅಲ್ಲಿ ಗುಣಗಳು ಇಲ್ಲ. ಆದ್ದರಿಂದ ಅವನ ಬುದ್ಧಿ

ಯೋಚಿಸಬೇಕಾದ ಕೆಲಸವಿಲ್ಲ. ಗುಣಗಳಿರುವಾಗಲೇ ಬುದ್ಧಿಗೆ ಕೆಲಸ ಇರುತ್ತದೆ. ಗುಣಗಳು ಇಲ್ಲದಿರುವಾಗ ಬುದ್ಧಿಗೆ ಯಾವುದೆ ಕೆಲಸ ಇರುವುದಿಲ್ಲ. ಆದುದರಿಂದ ಯೋಗಿಗೆ ಬುದ್ಧಿಯೊಂದಿಗೆ ಕೆಲಸವಿಲ್ಲ ಎಂದು, ಬುದ್ಧಿಯಿಲ್ಲ ಆದ್ದರಿಂದ ಯೋಚಿಸುವುದಿಲ್ಲ ಎಂದು ಪೂರ್ವದಲ್ಲಿ ಹಿರಿಯರು ವಿವರಿಸಿದ್ದಾರೆ. ಯೋಗಿ ಆದವನು ಗುಣಗಳಿರುವವರಂತೆ ಯೋಚಿಸುವುದಿಲ್ಲ ಎಂದು ತಿಳಿಸುವುದಕ್ಕೆ, ಆ ದಿನಗಳಲ್ಲಿ **"ನನ್ನ ಚವತಿಗೆ ಬುದ್ಧಿಯಿಲ್ಲ" ಎನ್ನುತ್ತಿದ್ದರು. ಅಷ್ಟೇ ಅಲ್ಲದೆ "ನನ್ನ ಚವತಿ! ನಿನಗೆ ಬುದ್ಧಿ ಇದೆಯಾ"** ಎಂದು ಕೇಳಿದಂತೆ ಮಾತನಾಡುತ್ತಿದ್ದರು. ಆ ವಿಧವಾಗಿ ಕರೆಯುವುದರಿಂದ ಎದುರಿಗಿರುವವನನ್ನು ಯೋಗಿಯಾಗಿ ವರ್ಣಿಸಿದಂತೆ ಅರ್ಥವಾಗುತ್ತಿತ್ತು. ಅಷ್ಟೇ ಅಲ್ಲದೆ ಯೋಗಿ ಆದವನು ಬೇಗನೆ ಮೋಕ್ಷವನ್ನು ಹೊಂದಿ ಇಲ್ಲದಂತೆ ಹೋಗುತ್ತಾನೆ ಎನ್ನುವ ಉದ್ದೇಶದಿಂದ, ಎದುರಿಗಿರುವ ವ್ಯಕ್ತಿಯ ಯೋಗಕ್ಕೆ ಬೆಲೆಕೊಡುತ್ತಾ **"ನನ್ನ ಚವತಿ ನೀನು ಬೇಗನೆ ನಾಶನವಾಗಿ ಹೋಗುತ್ತೀಯಾ"** ಎಂದು ಹೇಳುತ್ತಿದ್ದರು. ಈ ಮಾತುಗಳೆಲ್ಲವೂ ಪೂರ್ವದಲ್ಲಿ ಒಳ್ಳೆಯ ಜ್ಞಾನ ಉದ್ದೇಶವನ್ನು ಹೊಂದಿರುವಾಗ, ಅವೇ ಮಾತುಗಳು ಎಲ್ಲವೂ ಈದಿನ ಬೈಗಳ ಸಾಲಿನೊಳಗೆ ಸೇರಿಹೋಗಿವೆ.

ಒಂದು ಮಾತಿನ ಒಂದರ ಅರ್ಥ, ಅದರಬೆಲೆ ತಿಳಿದು ಮಾತನಾಡಿದರೆ ಅದು ಜ್ಞಾನವಾಗುತ್ತದೆ. ತಿಳಿಯದೆ ಮಾತನಾಡಿದರೆ ಅಜ್ಞಾನವಾಗುತ್ತದೆ. ಈ ಸೂತ್ರದ ಪ್ರಕಾರ 'ನನ್ನ ಚವತಿ' ಎನ್ನುವ ಮಾತು ತಿಳಿದವರಿಗೆ ಜ್ಞಾನ, ತಿಳಿಯದವರಿಗೆ ಅಜ್ಞಾನವಾಗಿದೆ. ಈ ವಿಷಯ ಚೆನ್ನಾಗಿ ಅರ್ಥವಾಗುವುದಕ್ಕೆ ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ಈ ಕಾಲದಲ್ಲಿ ಚೆನ್ನಾಗಿ ಕಷ್ಟಗಳಲ್ಲಿ ಇರುವ ಪುಲ್ಲಯ್ಯ ಎನ್ನುವ ವ್ಯಕ್ತಿ ನಾರಾಯಣಸ್ವಾಮಿ ದೇವಾಲಯಕ್ಕೆ ಹೋಗಿ, ಅಲ್ಲಿ ವಿಶ್ರಾಂತಿಯಾಗಿ ಕುಳಿತುಕೊಂಡು, ತನ್ನ ಮಿತ್ರನೊಂದಿಗೆ ಈ ವಿಧವಾಗಿ ಹೇಳುತ್ತಿದ್ದಾನೆ.

**ಪುಲ್ಲಯ್ಯ :–** ನಾನು ಹತ್ತು ವರ್ಷಗಳಿಂದ ಕ್ರಮ ತಪ್ಪದೆ ಈ ಗುಡಿಗೆ ಬಂದು ನಾರಾಯಣಸ್ವಾಮಿಗೆ ಕೈ ಮುಗಿದು ಹೋಗುತ್ತಿದ್ದೇನೆ. ಆದರೂ ನನಗೆ ಕ್ರಮವಾಗಿ

ಕಷ್ಟಗಳು ಬರುತ್ತಲೇ ಇವೆ. ಕೊನೆಗೆ ಪೂರ್ತಿ ದರಿದ್ರನಾಗಿ ಹೋಗಿದ್ದೇನೆ. ನಾನು ಈತನನ್ನು ಕೈ ಮುಗಿಯುವುದರಿಂದಲೇ ದರಿದ್ರನಾಗಿ ಹೋಗಿದ್ದೇನೆ, ಆದ್ದರಿಂದ ನಾನು ದಿನ ಕೈ ಮುಗಿಯುವ ದೇವರು ದರಿದ್ರದ ನಾರಾಯಣ ಎಂದು ತಿಳಿದುಹೋಗಿದೆ.

**ಮಿತ್ರನು :–** ನಿನಗೆ ದರಿದ್ರ ಬಂದರೆ ನಾರಾಯಣಸ್ವಾಮಿ ಕೂಡ ದರಿದ್ರ ನಾರಾಯಣನಾಗಿ ಕಾಣಿಸಿದ್ದಾನಾ?

**ಪುಲ್ಲಯ್ಯ :–** ಇಲ್ಲದಿದ್ದರೆ ಏನೆಂದು ಹೇಳಬೇಕು? ಈಗ ನಾನು ಹೇಳುವ ಮಾತೇ ಅಲ್ಲ. ಪೂರ್ವದಲ್ಲಿ ನಾನು ಚಿಕ್ಕಂದಿನಲ್ಲಿ ಕೆಲವರು ದರಿದ್ರದ ನಾರಾಯಣ ಎಂದು ಕಷ್ಟಗಳು ಬಂದವನನ್ನು ಕರೆಯುತ್ತಿದ್ದರು. ಆ ಗಾದೆ ನನಗೆ ನಿಜವಾಗಿದೆ. ಆದುದರಿಂದ ನಾನು ಮುಗಿಯುವ ನಾರಾಯಣನು ದರಿದ್ರದ ನಾರಾಯಣ ಎಂದಿದ್ದೇನೆ.

**ಮಿತ್ರನು :–** ಹಾಗೆ ಅನ್ನುವುದು ಒಳ್ಳೆಯದು ಅಲ್ಲವೇನೊ! ನಾವು ದರಿದ್ರರಾದರೆ ನಾರಾಯಣನನ್ನು ದರಿದ್ರನು ಎನ್ನುವುದು ಒಳ್ಳೆಯದು ಅಲ್ಲವಲ್ಲ!

**ಪುಲ್ಲಯ್ಯ :–** ಹಾಗೆ ಅನ್ನದೇ ಏನನ್ನಬೇಕು? ನಾನು ಇಷ್ಟುಕಾಲ ಕೈ ಮುಗಿದರು ಏನು ಪ್ರಯೋಜನವಿಲ್ಲ. ದೇವರ ಹತ್ತಿರ ನೀತಿಯಿಲ್ಲ, ನ್ಯಾಯವಿಲ್ಲ. ಆತನಿಗೆ ಸ್ವಲ್ಪವಾದರೂ ದಯೆ ಕೂಡ ಇಲ್ಲ, ನನಗೆ ತಿಳಿದಿರುವುದು ಅಷ್ಟೇ. ಈ ವಿಧವಾಗಿ ಮಾತನಾಡಿದ ಇಬ್ಬರ ಮಿತ್ರರ ಮಾತುಗಳನ್ನು ರಾಮಯ್ಯ, ಈರಯ್ಯ ಎನ್ನುವ ಮತ್ತೊಬ್ಬ ಇಬ್ಬರು ಮಿತ್ರರು ಕೇಳಿಸಿಕೊಂಡಿದ್ದಾರೆ. ಆ ಮಾತನ್ನು ಕೇಳಿದ ರಾಮಯ್ಯ, ಈರಯ್ಯ ಈ ವಿಧವಾಗಿ ಮಾತನಾಡಿಕೊಳ್ಳುತ್ತಿದ್ದಾರೆ.

**ರಾಮಯ್ಯ :–** ಪುಲ್ಲಯ್ಯ ಮಾತನಾಡುವುದರಲ್ಲಿ ತಪ್ಪೇನಿದೆ? ಆತನಿಗೆ ಕಷ್ಟಗಳು ಹೆಚ್ಚಾಗಿವೆ, ಆದ್ದರಿಂದ ದೇವರ ಹತ್ತಿರ ನೀತಿ, ನ್ಯಾಯವಿಲ್ಲವೆಂದು ಸ್ವಲ್ಪವಾದರೂ ದಯೆ ಇಲ್ಲ ಎಂದಿದ್ದಾನೆ. ಹೆಚ್ಚಾಗಿ ಕಷ್ಟಗಳು ಬಂದರೆ ಇಷ್ಟು ಕಾಲ ಕೈ ಮುಗಿದ ದೇವರ ಮೇಲೆ ಕೋಪ ಬಾರದೆ ಯಾರಮೇಲೆ ಬರುತ್ತದೆ.

**ಈರಯ್ಯ :–** ಪುಲ್ಲಯ್ಯಗೆ ಕೋಪಬಂದು ದೇವರನ್ನು "ದರಿದ್ರ ನಾರಾಯಣ"

ಎಂದಿದ್ದಾನೆ. ಅದು ನಿನಗೂ, ಪುಲ್ಲಯ್ಯನಿಗೂ ಬೈಗಳಾಗಿ ಇರಬಹುದು. ಆದರೆ ಆತನು ಆ ಮಾತನ್ನು ಹೇಳುವುದರಲ್ಲಿ ಸ್ವಲ್ಪ ಬದಲಾಯಿಸಿ ವ್ಯತ್ಯಾಸದಿಂದ ಹೇಳಿದ್ದಾನೆ. ಆದರೆ ಆ ವ್ಯತ್ಯಾಸವನ್ನು ಸರಿಮಾಡಿ ಮಾತನಾಡಿದರೆ, ಆ ಮಾತು ವಾಸ್ತವವಾದುದೇ ಎಂದು ಹೇಳಬಹುದು. ಆ ಮಾತನ್ನು ಪೂರ್ವದಲ್ಲಿ ದರಿದ್ರದ ನಾರಾಯಣ ಎಂದು ಹೇಳುತ್ತಿರಲಿಲ್ಲ, **"ದರಿದಾಪು ನಾರಾಯಣ"** ಎಂದು ಹೇಳುತ್ತಿದ್ದರು. ದರಿದಾಪು ಎನ್ನುವ ಪದ ಸ್ವಲ್ಪ ಹೇಳುವುದರಲ್ಲಿ ಬದಲಾಗಿ **"ದರಿದ್ರಾಪು"** ಎಂದು ಕರೆಯುವುದು ನಡೆದಿದೆ. ಮೊದಲು "ದಾ" ಗೆ "ರ" ವತ್ತು ಬಂದಿದೆ. ನಂತರ ಸ್ವಲ್ಪ ಕಾಲಕ್ಕೆ 'ದ್ರಾ' ದೀರ್ಘ ಹೋಗಿ "ದ್ರ" ಆಗಿ ಉಳಿದುಹೋಗಿದೆ. ಕೊನೆಗೆ "ದರಿದ್ರಪು" ಎಂದು ಈದಿನ ಕರೆಯಲ್ಪಡುತ್ತಿದೆ. ಪೂರ್ವದಲ್ಲಿ ಜ್ಞಾನಿಗಳ ಉದ್ದೇಶ "ದರಿದಾಪು" ಎಂದು ಇದೆ ಅದರ ಅರ್ಥ ದರಿ ಎಂದರೆ ಸಮೀಪದಲ್ಲಿ ಎಂದು, ದಾಪು ಎಂದರೆ ದೂರವಾಗಿ ಎಂದು ತಿಳಿಯಬೇಕು. ನಾರಾಯಣ ಎಂದರೆ ನಾಶವಿಲ್ಲದ ದೇವರೆಂದು ಅರ್ಥ. ನಾಶನವಿಲ್ಲದ ದೇವರು ನಮಗೆ ಹತ್ತಿರದಲ್ಲಿದ್ದಾನೆ, ಮತ್ತು ದೂರದಲ್ಲಿಯೂ ಕೂಡ ಇದ್ದಾನೆ. ಇದರಿಂದ ದೇವರು ಎಲ್ಲಕಡೆ ಅಣುಅಣುವಿನಲ್ಲಿ ವ್ಯಾಪಿಸಿದ್ದಾನೆಂದು ತಿಳಿಯುತ್ತಿದೆ. ಹತ್ತಿರ, ದೂರ, ಎಲ್ಲಾ ಇದ್ದಾನೆನ್ನುವುದಕ್ಕೆ, ಇಲ್ಲಿ ಇದ್ದಾನೆ ಅಲ್ಲಿ ಇಲ್ಲ ಎನ್ನುವುದಕ್ಕೆ ಸಾಧ್ಯವಾಗದೆ, ದರಿದಾಪಿನಲ್ಲಿ ಇದ್ದಾನೆಂದು ಹಿರಿಯರು ಪೂರ್ವದಲ್ಲಿ ಹೇಳಿದಮಾತು "ದರಿ ದಾಪು ನಾರಾಯಣ. ಕೆಲವರು ಭಕ್ತರು ಈ ವಿಷಯ ಒಂದು ಹಾಡಾಗಿ ಹಾಡುವುದು ನೋಡಿದ್ದೇನೆ.

**1) ದರಿ ದಾಪು ನಾರಾಯಣ! ನಿನಗೆ ತಿಳಿಯದಿರುವುದು ಇಲ್ಲ ನಾರಾಯಣ!**

**2) ಮುಂದೆ ಹಿಂದೆ ನಾರಾಯಣ! ನೀನಿಲ್ಲದ ಸ್ಥಳವಿಲ್ಲ ನಾರಾಯಣ!**

**3) ಮೇಲೆ ಕೆಳಗೆ ನಾರಾಯಣ! ನೀನು ನೋಡದಿರುವುದು ಇಲ್ಲ ನಾರಾಯಣ!**

ಎಂದುಹಾಡು ಹಾಡುತ್ತಿದ್ದರು. ಪೂರ್ವದಲ್ಲಿನ ಜ್ಞಾನಿಗಳು ಹೋಗಿದ್ದಾರೆ, ಅವರ ಜ್ಞಾನ ಹೋಗಿದೆ. ಈದಿನ ದರಿದಾಪು ನಾರಾಯಣ ಎನ್ನುವ ಪದ

ದರಿದ್ರಪು ನಾರಾಯಣನಾಗಿ ಬದಲಾಗಿಹೋಗಿದೆ. ಪೂರ್ವದಲ್ಲಿ ಜ್ಞಾನ ಹೊಂದಿದವರು ದೇವರನ್ನು ಕೀರ್ತಿಸುವುದಕ್ಕೆ ಆ ಪದ ಬಳಸಿದರೆ, ಈದಿನ ಅಜ್ಞಾನದಿಂದ ದೇವರನ್ನು ದೂಷಿಸುವುದಕ್ಕೆ ಆ ಪದವನ್ನು ಸ್ವಲ್ಪ ಬದಲಾಯಿಸಿ ಬಳಸುತ್ತಿದ್ದಾರೆ.

**ರಾಮಯ್ಯ :–** ಅರೇ ! ಈ ಮಾತಿನಲ್ಲಿ ಇಷ್ಟು ಅರ್ಥ ಅಡಗಿರುವಂತೆ ಯಾರಿಗೂ ತಿಳಿದಿಲ್ಲವೇ! ಕಾಲಕ್ರಮೇಣ ಮಾತು ಸ್ವಲ್ಪ ಬದಲಾಗಿಹೋಗಿ ಎಷ್ಟು ಅಜ್ಞಾನದಲ್ಲಿ ಬಿದ್ದಿದ್ದೇವೆ.

**ಈರಯ್ಯ :–** ಹೌದು ರಾಮಯ್ಯ! ನಮ್ಮ ಬಾಯಿಂದ ಬರುವ ಮಾತುಗಳು ಎಷ್ಟೋ ಅರ್ಥದಿಂದ ಕೂಡಿಕೊಂಡಿದ್ದರೂ, ಅವುಗಳ ಭಾವನೆ ನಮಗೆ ತಿಳಿಯದೇ ಇರುವುದರಿಂದ ಒಳ್ಳೆಯ ಮಾತನ್ನು ಕೆಟ್ಟಮಾತಾಗಿ, ಕೆಟ್ಟಮಾತನ್ನು ಒಳ್ಳೆಯ ಮಾತಾಗಿ ಲೆಕ್ಕಿಸಿಕೊಳ್ಳುತ್ತಿದ್ದೇವೆ. ನಮಗೆ ಕೆಟ್ಟದನ್ನು ಉಂಟುಮಾಡುವ ವಾಕ್ಯಗಳನ್ನು ಆಶೀರ್ವಾದಗಳೆಂದು, ಒಳ್ಳೆಯದನ್ನು ಸೂಚಿಸುವ ವಾಕ್ಯಗಳನ್ನು ದೂಷಿಸುವ ಬೈಗಳೆಂದು ತಿಳಿದುಕೊಳ್ಳುತ್ತಿದ್ದೇವೆ. ಈಗ ಪುಲ್ಲಯ್ಯ ಕೂಡ ತನಗೆ ತಿಳಿಯದಿರುವುದರಿಂದ ಒಳ್ಳೆಯ ವಾಕ್ಯಗಳನ್ನೇ ಮಾತನಾಡುತ್ತಾ, ದೇವರನ್ನು ನಿಲ್ಲಿಸಿ ಕೇಳಿದಂತೆ ದೇವರಿಗೆ ದಯೆಯಿಲ್ಲ, ನೀತಿಯಿಲ್ಲ, ನ್ಯಾಯವಿಲ್ಲ ಎಂದಿದ್ದಾನೆ. ಪುಲ್ಲಯ್ಯ ಯಾವ ಭಾವನೆಯಿಂದ ಹೇಳಿದರೂ ಆತನು ಅಂದಿರುವವೆಲ್ಲ ಸತ್ಯವಾದ ವಾಕ್ಕುಗಳೇ. ಪುಲ್ಲಯ್ಯ ದೇವರನ್ನು ನಿಂದಿಸುವ ಭಾವನೆಯಿಂದ ಅಂದರೂ, ವಾಸ್ತವವಾಗಿ ದೇವರು ದಯೆವಿಲ್ಲದವನೇ. ದೇವರಿಗೆ ಗುಣಗಳಿರುವುದಿಲ್ಲ, ದೇವರು ಗುಣರಹಿತನು. ಕೋಪ ಎನ್ನುವ ಗುಣಕ್ಕೆ ವಿರುದ್ಧವಾದುದು ದಯಾ ಗುಣ. ದೇವರು ಗುಣರಹಿತನು ಆದ್ದರಿಂದ ಆತನಿಗೆ ಒಳ್ಳೆಯ ಗುಣವಾದ ದಯೆಯಾಗಲಿ, ಕೆಟ್ಟ ಗುಣವಾದ ಕೋಪವಾಗಲಿ ಇರುವುದಿಲ್ಲ. ಆದುದರಿಂದ ಪುಲ್ಲಯ್ಯ ಹೇಳಿದಮಾತು ವಾಸ್ತವವಾದುದೇ. ಅಷ್ಟೇ ಅಲ್ಲದೆ ಪುಲ್ಲಯ್ಯ ತನ್ನ ಸ್ನೇಹಿತನೊಂದಿಗೆ ದೇವರ ಹತ್ತಿರ ನೀತಿ, ನ್ಯಾಯ ಇಲ್ಲವೆಂದು ಹೇಳಿದ್ದಾನೆ. ಪ್ರಪಂಚದಲ್ಲಿ ನೀತಿ, ನ್ಯಾಯ ಇಲ್ಲದವನನ್ನು ಅವಿನೀತಿ ಪರನನ್ನಾಗಿ,

ಅನ್ಯಾಯಪರನನ್ನಾಗಿ ಒಟ್ಟಿನಲ್ಲಿ ಕೆಟ್ಟವನನ್ನಾಗಿ ಲೆಕ್ಕಿಸಿಕೊಳ್ಳುತ್ತೇವೆ. ಪುಲ್ಲಯ್ಯ ದೇವರ ಮೇಲೆ ಕೋಪದಿಂದ ದೇವರು ನೀತಿ ನ್ಯಾಯ ಇಲ್ಲದವನೆಂದರೂ ಆ ಮಾತು ವಾಸ್ತವವೇ.

ಪ್ರಪಂಚದಲ್ಲಿ ಹುಟ್ಟಿದ ಮನುಷ್ಯ ಸಕ್ರಮವಾಗಿ ನಡೆದುಕೊಳ್ಳುವುದಕ್ಕೆ ನೀತಿ, ನ್ಯಾಯ ಅಗತ್ಯ. ಆದರೆ ದೇವರಿಗೆ ನೀತಿ, ನ್ಯಾಯ ಅಗತ್ಯವಿಲ್ಲ. ದೇವರ ಹತ್ತಿರ ಇರುವವು ಜ್ಞಾನ, ಧರ್ಮ. ದೇವರಿಗೆ ಪ್ರಪಂಚದ ನೀತಿಯಾಗಲಿ ಪ್ರಪಂಚದ ನ್ಯಾಯವಾಗಲಿ ಅಗತ್ಯವಿಲ್ಲ. ದೇವರು ನೀತಿ, ನ್ಯಾಯ ಆಧಾರ ಮಾಡಿಕೊಂಡು ಇರುವುದಿಲ್ಲ. ದೇವರು ಜ್ಞಾನ, ಧರ್ಮಗಳನ್ನು ಹೊಂದಿರುತ್ತಾನೆ. ಆದ್ದರಿಂದ ಮನುಷ್ಯನು ಕೂಡ ಜ್ಞಾನ, ಧರ್ಮಗಳನ್ನು ತಿಳಿದುಕೊಂಡರೇನೆ ದೇವರ ಹತ್ತಿರಕ್ಕೆ ಹೋಗಬಲ್ಲನು. ಹಾಗಲ್ಲದೆ ಪ್ರಪಂಚದಲ್ಲಿನ ನೀತಿಯನ್ನು, ನ್ಯಾಯವನ್ನು ಆಧಾರ ಮಾಡಿಕೊಂಡು ಯಾರು ದೇವರ ಹತ್ತಿರಕ್ಕೆ ಹೋಗಲಾರರು. ನೀತಿ, ನ್ಯಾಯದಿಂದ ಮನುಷ್ಯನಿಗೆ ಪುಣ್ಯ, ಅವಿನೀತಿ ಅನ್ಯಾಯಗಳಿಂದ ಪಾಪ ಬರುತ್ತವೆ, ಆದರೆ ಮುಕ್ತಿ ಬರುವುದಿಲ್ಲ. ಆದ್ದರಿಂದ ನೀತಿ, ನ್ಯಾಯ ಲೋಕಸಂಬಂಧವಾದವು. ಜ್ಞಾನ ಧರ್ಮ ದೈವಸಂಬಂಧವಾದವೆಂದು ಹೇಳಬಹುದು. ಪುಲ್ಲಯ್ಯ ತಿಳಿಯದೆ ಹೇಳಿದರೂ ದೇವರಿಗೆ ನೀತಿ ನ್ಯಾಯ ಇಲ್ಲ ಎನ್ನುವುದು ಸತ್ಯವಾದ ಮಾತೇ. ಈ ವಿಧವಾಗಿ ಅನೇಕ ವಿಧಗಳಾಗಿ ಒಳ್ಳೆಯದನ್ನು ಕೆಟ್ಟದಾಗಿ, ಕೆಟ್ಟದನ್ನು ಒಳ್ಳೆಯದಾಗಿ ಮನುಷ್ಯ ಅರ್ಥ ಮಾಡಿಕೊಳ್ಳುವುದರಿಂದ ಬೈಗಳ್ಯಾವುವೊ ಆಶೀರ್ವಾದಗಳ್ಯಾವುವೊ ತಿಳಿಯದೆ, ಬೈಗುಳ ಸ್ಥಾನದೊಳಗೆ ಆಶೀರ್ವಾದಗಳು, ಆಶೀರ್ವಾದಗಳ ಸ್ಥಾನದೊಳಗೆ ಬೈಗಳು ಸೇರಿಹೋಗಿವೆ. ಇರುವ ಸತ್ಯವನ್ನು ಆಲೋಚಿಸಿದರೆ ಪೂರ್ವದಲ್ಲಿರುವ ಭಾವನೆಗು, ಈಗಿನ ಭಾವನೆಗು ಎಷ್ಟೋ ವ್ಯತ್ಯಾಸ ಬಂದಿದೆಯೆಂದು ಹೇಳಬಹುದು. ಆ ವ್ಯತ್ಯಾಸಗಳನ್ನೇ ಈ ಗ್ರಂಥದಲ್ಲಿ ಬಿಡಿಸಿ ಹೇಳುವುದಾಗಿದೆ ಯೆಂದು ಗ್ರಹಿಸಬೇಕು. ಹಾಗಲ್ಲದೆ ನಾವು ಯಾವುವೊ ಕಲ್ಪಿತಗಳು ಮಾಡಿ ಬರೆದಿದ್ದಾನೆಂದು ತಿಳಿದುಕೊಳ್ಳಬೇಡಿ. ಇವು ಕಲ್ಪಿತವಾದ ಕವಿತ್ವವಲ್ಲ,

ಯಥಾರ್ಥವಾದ, ಬದಲಾವಣೆ ಹೊಂದಿದ ವಿಷಯಗಳೆಂದು ನಿರ್ಣಯಿಸಿ ಹೇಳುತ್ತಿದ್ದೇವೆ.

# ಮೂರು ಬಿಟ್ಟವನು

ಇದೇ ವಿಧವಾಗಿ ಪೂರ್ವದಲ್ಲಿ ಬ್ರಹ್ಮಯೋಗಿಯನ್ನು ಕುರಿತು ಹೇಳಿದ ಮಾತು ಈದಿನ ಹೇಳನವಾಗಿ ಮಾತನಾಡುವಂತೆ ಬದಲಾಗಿಹೋಗಿದೆ. ದೇವರನ್ನು ಸೇರುವುದಕ್ಕೆ ಗೀತೆಯಲ್ಲಿ ಬೋಧಿಸಲ್ಪಟ್ಟ ಮಾರ್ಗಗಳು ಎರಡು ಯೋಗಗಳಾಗಿ ಇವೆ. ಅವುಗಳೇ ಒಂದು ಬ್ರಹ್ಮಯೋಗ, ಎರಡು ಕರ್ಮಯೋಗ, ಕರ್ಮಯೋಗ ಹೊರಗಿನ ಪ್ರಪಂಚದೊಂದಿಗೆ ಸಂಬಂಧ ಇಟ್ಟುಕೊಂಡು ಕೆಲಸಗಳು ಮಾಡುತ್ತಾ ಸಾಧಾರಣ ಮನುಷ್ಯ ಇರುವಂತೆ ಕಾಣಿಸುವುದಾಗಿದ್ದು, ಬ್ರಹ್ಮಯೋಗ ಹೊರಗಿನ ಪ್ರಪಂಚದೊಂದಿಗೆ ಸಂಬಂಧ ಇಟ್ಟುಕೊಳ್ಳದೆ ಯಾವ ಕೆಲಸಗಳು ಮಾಡದೆ ಒಳಗೆ ನಿಶ್ಚಲವಾಗಿ ಇರುವುದು. ಬ್ರಹ್ಮಯೋಗಿಗೆ ಐದು ಜ್ಞಾನೇಂದ್ರಿಯಗಳು ಕೆಲಸಮಾಡುವುದಿಲ್ಲ. ಒಂದುವೇಳೆ ಕೆಲಸಮಾಡಿದರು ಆ ವಿಷಯಗಳನ್ನು ಗ್ರಹಿಸುವ ಮನಸ್ಸು ಇರುವುದಿಲ್ಲ. ಆತನ ಮುಂದೆ ಚಿನ್ನದ ಮುದ್ದೆ ಇಟ್ಟರೂ, ದುಂಡನೆ ಕಲ್ಲು ಇಟ್ಟರೂ ಸಮಾನವೇ. ಹಾಗೆಯೇ ಆತನನ್ನು ಹೊಗಳಿದರು ದೂಷಿಸಿದರು ಅವುಯಾವುವು ಆತನಿಗೆ ತಿಳಿಯುವುದಿಲ್ಲ, ಆದ್ದರಿಂದ ಯಾವುದಕ್ಕು ಸ್ಪಂದನೆ ಇರುವುದಿಲ್ಲ. ಆದ್ದರಿಂದ ಬ್ರಹ್ಮಯೋಗಿ ವಿಷಯ ತಿಳಿದವರು ಆತನೊಂದಿಗೆ ಯಾರು ಮಾತನಾಡುವುದಿಲ್ಲವೆಂದು, ಯಾರಾದರೂ ಮಾತನಾಡಿದರು ಆತನು ಪುನಃ ಮಾತನಾಡುವುದಿಲ್ಲವೆಂದು, ಆದ್ದರಿಂದ ಆತನೊಂದಿಗೆ ಯಾರು ಮಾತನಾಡುತ್ತಾರೆಂದು ಹೇಳುತ್ತಿದ್ದರು. ಬ್ರಹ್ಮಯೋಗಿ ತನ್ನ ಶರೀರದಲ್ಲಿ ಮೂರು ಗುಣವಿಷಯಗಳೊಂದಿಗೆ ಸಂಬಂಧವಿಲ್ಲದೆ ಇರುತ್ತಾನೆ. ಆದ್ದರಿಂದ ಮೂರು ಬಿಟ್ಟವನೆಂದು ಆತನನ್ನು ಕರೆಯುತ್ತಿದ್ದರು. ಒಳಗೆ ಮೂರು ಗುಣಗಳು ಬಿಟ್ಟವನು ಮತ್ತು ಹೊರಗೆ ಯಾರೊಂದಿಗು ಸಂಬಂಧವಿಲ್ಲದವನು ಆದ್ದರಿಂದ **"ಮೂರು ಬಿಟ್ಟವನೊಂದಿಗೆ ಯಾರು ಮಾತನಾಡುತ್ತಾರೆಂದು"** ಬ್ರಹ್ಮಯೋಗಿಯನ್ನು

ಕುರಿತು ಹೇಳುತ್ತಿದ್ದರು. ಬ್ರಹ್ಮಯೋಗಿವೊಂದರ ಘನತೆಯನ್ನು ಕುರಿತು ಹೇಳಿದ ಮಾತನ್ನು ಮೂರು ಬಿಟ್ಟವನೆಂದರೆ ಈದಿನ ಆ ಮಾತನ್ನು ಇತರರನ್ನು ಹೇಳನವಾಗಿ ಮಾತನಾಡುವುದಕ್ಕೆ ಉಪಯೋಗಿಸುತ್ತಿದ್ದಾರೆ. ಹೇಳಿದ ಮಾತನ್ನು ಕೇಳದವನನ್ನು, ಒಪ್ಪಿಕೊಳ್ಳದವನನ್ನು ಅವಹೇಳನವಾಗಿ ಮಾತನಾಡು ವಾಗ ಮಾತನಾಡುವವರು ಮೂರೆಂದರೆ ಏನು? ಮೂರನ್ನು ಬಿಡುವುದೆಂದರೇ ಏನು? ಎಂದು ಆಲೋಚಿಸುತ್ತಿಲ್ಲ. ಪಾಪ ಹರಿಯಲಿ ಎನ್ನುವ ಮಾತು ದೂಷಣೆಯೊಳಗೆ ಸೇರದಂತೆ ಮಧ್ಯದಲ್ಲಿ ರೂಢಿಪದದಂತೆ ನಿಂತುಹೋಗಿ, ಬ್ರಹ್ಮಯೋಗಿಯನ್ನು ಸೂಚಿಸುವ ವಾಕ್ಯ ಅವಹೇಳನ ವಾಕ್ಯವಾಗಿ ನಿಂತುಹೋಗಿದೆ.

ಕಾಲ ಎಂದರೆ ಹಿಂದಿ ಭಾಷೆಯಲ್ಲಿ ಕಪ್ಪು ಎಂದು ಅರ್ಥ. ಕಾಲ ಎಂದರೆ ತೆಲುಗುಭಾಷೆಯಲ್ಲಿ ಕಾಣಿಸದಿರುವುದೆಂದು ಮತ್ತು ಕಾಣಿಸದಂತೆ ಹೋಗುವುದೆಂದು ಅರ್ಥ. ಕಾಲವನ್ನು ಪರಮಾತ್ಮ ಸ್ವರೂಪವೆಂದು ಹೇಳಬಹುದು. ಕಾಲ ನಮ್ಮ ಮುಂದೆಯೇ ಕಳೆದು ಹೋಗುತ್ತಿದ್ದರೂ ಇದು ಇಂತದ್ದೆಂದು ಯಾರು ಗುರುತಿಸಲಾರರು. ಕತ್ತಲಲ್ಲಿ ಬೆರೆತುಹೋದರೆ ಯಾವುದೂ ತಿಳಿಯುವುದಿಲ್ಲ ಮತ್ತು ಎಲ್ಲವನ್ನು ಕಾಣಿಸದಂತೆ ತನ್ನಲ್ಲಿ ಬೆರೆಸಿಕೊಳ್ಳುತ್ತಿದೆ ಆದ್ದರಿಂದ ಕಪ್ಪನೆಯ ಕತ್ತಲನ್ನು ಕಾಲವೆಂದು ಹೇಳಿಕೊಳ್ಳುತ್ತಿದ್ದೇವೆ. ಕಾಲ ಭವಿಷ್ಯತ್ತನ್ನು ವರ್ತಮಾನವಾಗಿ ಮಾಡುತ್ತಿದೆ, ವರ್ತಮಾನ ಕಾಲವನ್ನು ಭೂತಕಾಲವಾಗಿ ಮಾಡುತ್ತಿದೆ. ಕಣ್ಣಿಗೆ ಕಾಣಿಸದ ಕಾಲವು ಕಣ್ಣಿಗೆ ಕಾಣಿಸುವವುಗಳನ್ನು, ಕಿವಿಗೆ ಕೇಳಿಸುವವುಗಳನ್ನು ಯಾವುವು ಕೇಳದಂತೆ ಕಾಣಿಸದಂತೆ ಮಾಡುತ್ತಿದೆ. ಆ ವಿಧಾನದಿಂದ ಎಷ್ಟೋ ಜ್ಞಾನ ಕಾಲಕ್ರಮೇಣ ತಿಳಿಯದಂತೆಹೋಗಿದೆ. ಅದೇ ವಿಧವಾಗಿಯೇ ಜ್ಞಾನದಿಂದ ಕೂಡಿಕೊಂಡ ಆಶೀರ್ವಾಗಳು ಅಜ್ಞಾನದಿಂದ ಕೂಡಿಕೊಂಡ ದೂಷಣೆಗಳಾಗಿ ಬದಲಾಗಿ ಹೋಗಿವೆ. ಹಾಗೆ ಬದಲಾಗಿಹೋಗಿ ಎಲ್ಲರಿಗೂ ಮಧ್ಯದಲ್ಲಿರುವವುಗಳನ್ನು ಕೂಡ ಮನಃ ಇಲ್ಲದಂತೆ ಮಾಡುವುದು ಕಾಲವೊಂದರ ಕೆಲಸ. ಆದ್ದರಿಂದ ದೂಷಣೆಗಳಾಗಿರುವ ಆಶೀರ್ವಾದಗಳು ಕೊನೆಗೆ ದೂಷಣೆಗಳಾಗಿ ಕೂಡ

ಇಲ್ಲದಂತೆಹೋಗುವುದಕ್ಕೆ ಪ್ರಾರಂಭಿಸಿವೆ. ಎಲ್ಲಿಯಾದರು ಹಳ್ಳಿಪ್ರಾಂತ್ಯಗಳಲ್ಲಿ ಉಳಿದಿದ್ದು, ಅದೂ ಹೆಂಗಸರ ಬಾಯಲ್ಲಿ ಬರುತ್ತಿರುವ ಕೆಲವು ದೂಷಣೆಗಳನ್ನು ಜ್ಞಾನದ ಪ್ರಕಾರ ಆಶೀರ್ವಾದಗಳೆಂದು ಹೇಳಿಕೊಂಡು, ಅವುಗಳಿಗೆ ಪುನಃ ಹೊಸದಾಗಿ ಅರ್ಥ ತಂದುಕೊಂಡಿದ್ದೇವೆ. ಹಾಗೆಯೇ ಕೆಲವು ಆಶೀರ್ವಾಗಳನ್ನು ಜ್ಞಾನದ ಪ್ರಕಾರ ದೂಷಣೆಗಳೆಂದು ಹೇಳಿಕೊಂಡು ಅವುಗಳಿಗೆ ನಿಜವಾದ ಅರ್ಥ ಏನಿದೆಯೊ ನಂತರ ಪುಟದಲ್ಲಿ ನೋಡೋಣ.

# ಕಾಮ್ಯಾರ್ಥ ಫಲಸಿದ್ಧಿರಸ್ತು

ದೂಷಣೆ ರೂಪದಲ್ಲಿ ಉಳಿದಿರುವ ಆಶೀರ್ವಾದಗಳನ್ನು ಎಲ್ಲಿಯಾದರೂ ಕುಗ್ರಾಮದಲ್ಲಿ ಸ್ತ್ರೀಯರು ವಾಧಿಸಿಕೊಳ್ಳುವಾಗ ಬೈಗಳ ರೂಪದಲ್ಲಿ ಬಳಸುತ್ತಿರುವಾಗ, ಆಶೀರ್ವಾದಗಳ ರೂಪದಲ್ಲಿರುವ ದೂಷಣೆಗಳನ್ನು ಮಾತ್ರ ಸ್ವಾಮಿಗಳಾಗಿರುವ ಪುರುಷರೆ ಹೆಚ್ಚಾಗಿ ಬಳಸುತ್ತಿದ್ದಾರೆ. ಅವುಗಳಲ್ಲಿ ಅಲ್ಲಲ್ಲಿ ಕೇಳಿಸುವ ಕೆಲವು ವಾಕ್ಯಗಳನ್ನು ವಿವರಿಸಿಕೊಳ್ಳೋಣ. ಮನುಷ್ಯನಿಗಿರುವ ಗುಣಗಳು ಹನ್ನೆರಡು. ಅದರಲ್ಲಿ ಆರು ಗುಣಗಳು ಕೆಟ್ಟವು, ಆರು ಗುಣಗಳು ಒಳ್ಳೆಯವು ಇವೆ. ಒಳ್ಳೆಯ ಗುಣಗಳು ಪುಣ್ಯವನ್ನು, ಕೆಟ್ಟ ಗುಣಗಳು ಪಾಪವನ್ನು ಪ್ರಾಪ್ತಿಸುವಂತೆ ಮಾಡುತ್ತವೆ. ಪಾಪವನ್ನು ಸಂಪಾದಿಸಿಡುವ ಕೆಟ್ಟಗುಣಗಳಲ್ಲಿ ಮುಖ್ಯವಾದುದು, ಮೊದಲನೆಯದು ಆಸೆ ಎನ್ನುವ ಗುಣ. ಆಸೆ ಎನ್ನುವ ಗುಣ ತನ್ನ ಪ್ರಭಾವದಿಂದ ಮಾನವನಿಂದ ಯಾವ ಕೆಲಸವನ್ನಾದರು ಮಾಡಿಸುತ್ತದೆ. ಆಸೆ ಎನ್ನುವ ಗುಣವನ್ನು ಕಾಮವೆಂದು ಕೂಡ ಕರೆಯುತ್ತಾರೆ. ಕಾಮವನ್ನು ಒಂದು ಶೃಂಗಾರ ವಿಷಯದಲ್ಲಿ ಮಾತ್ರ ಕೆಲಸ ಮಾಡುವ ಗುಣವೆಂದುಕೊಳ್ಳಬಾರದು. ಯಾವ ವಿಷಯಗಳಲ್ಲಾದರೂ ಆಸೆ ಹುಟ್ಟಿದರೆ ಅದನ್ನು ಕಾಮವೆನ್ನಬಹುದು. ಧನ ಬೇಕೆಂದುಕೊಳ್ಳುವುದು ಕೂಡ ಕಾಮವೇ ಆಗುತ್ತದೆ. ಆಸೆ ಎನ್ನುವ ಗುಣದಿಂದ ಧನದ ಮೇಲೆ ಕೋರಿಕೆಗಳುಂಟಾಗುವುದನ್ನು ಕಾಮ್ಯಾರ್ಥ ಎಂದು ಕೂಡ ಹೇಳುತ್ತಾರೆ. ಮೊದಲು **'ಕಾಮ್ಯಾರ್ಥ ಫಲಸಿದ್ಧಿರಸ್ತು'** ಎನ್ನುವ ವಾಕ್ಯ ಮಾನವನಿಗೆ

ಪಾಪವನ್ನು ಕೈಗೂಡಿಸುವುದಾಗಿ ಕೆಟ್ಟದನ್ನು ಆಚರಿಸುವಂತೆ ಮಾಡುವ ದೂಷಣೆಯಾಗಿ ಇರುತ್ತಿತ್ತು. ಅದು ಹೇಗೆಂದರೆ!

ಪೂರ್ವದಲ್ಲಿ ಒಂದಾನೊಂದು ಊರಿನಲ್ಲಿ ಗುಣಂಜಯ ಎನ್ನುವ ವ್ಯಕ್ತಿ ಇದ್ದನು. ಆತನ ಹೆಸರು ಗುಣಂಜಯ ಅದರೂ ಆತನೇನು ಗುಣಗಳು ಜಯಿಸಿದವನಲ್ಲ. ಹಾಗೆಂದು ಸಾಧಾರಣ ವ್ಯಕ್ತಿ ಕೂಡ ಅಲ್ಲ, ಗುಣಗಳಲ್ಲಿ ಆಳವಾಗಿ ಸೇರಿಕೊಂಡು ಹೋಗಿರುವ ಮನುಷ್ಯ ಆತನು. ಆಸೆ ಎನ್ನುವ ಗುಣ ಬಹಳ ತೀವ್ರವಾಗಿ ಕೆಲಸಮಾಡುತ್ತಿರುತ್ತದೆ. ಯಾವಾಗಲೂ ತನಗೆ ಇತರರ ಒಡವೆ ಸುಲಭವಾಗಿ ಬೇಕೆಂದು ಕೋರಿಕೊಳ್ಳುವ ಮನುಷ್ಯ. ಆತನಿಗೆ ದೈವಜ್ಞಾನವೆಂದರೆ ಏನೋ ತಿಳಿದಿಲ್ಲ. ದೈವಜ್ಞಾನ ಇರುವ ಒಬ್ಬ ದೊಡ್ಡ ಸ್ವಾಮೀಜಿ ಗುಣಂಜಯನಿರುವ ಊರಿಗೆ ಬಂದಿದ್ದಾನೆ. ಆ ಊರಿನವರೆಲ್ಲರೂ ಆ ಸ್ವಾಮೀಜಿ ದರ್ಶನಕ್ಕೆ ಹೋಗಿ ಆತನ ಹತ್ತಿರ ಸ್ವಲ್ಪ ಜ್ಞಾನ ತಿಳಿದುಕೊಂಡು ಬರುತ್ತಿದ್ದರು. ಆ ಸ್ವಾಮೀಜಿ ಮಹತ್ವವನ್ನು ಕೆಲವರು ಬಹು ದೊಡ್ಡದಾಗಿ ಹೇಳಿಕೊಳ್ಳುತ್ತಿರುವಾಗ ಗುಣಂಜಯ ಸ್ವಾಮೀಜಿಯನ್ನು ಕುರಿತು ಕೇಳಿದ್ದಾನೆ. ಗುಣಂಜಯ ಕೇಳುತ್ತಿರುವಾಗ ಒಬ್ಬನು ಮತ್ತೊಬ್ಬನೊಂದಿಗೆ ಈ ವಿಧವಾಗಿ ಹೇಳುತ್ತಿದ್ದನು. **"ನನಗೆ ಎಷ್ಟೋ ಕಾಲದಿಂದ ಜ್ಞಾನ ತಿಳಿದುಕೊಳ್ಳಬೇಕೆನ್ನುವ ಕೋರಿಕೆ ಇರುತ್ತಿತ್ತು. ಸ್ವಾಮಿಯವರ ಹತ್ತಿರಕ್ಕೆ ಹೋದ ತಕ್ಷಣ ನನ್ನನ್ನು ನೋಡಿ ನಿನ್ನಕೋರಿಕೆ ನೆರವೇರುತ್ತದೆಂದು ಆಶೀರ್ವಾದಿಸಿದ್ದಾನೆ. ಆತನು ಆಶೀರ್ವಾದಿಸಿದಂತೆ ಆತನ ಮೂಲಕ ನನಗೆ ತಿಳಿಯದಿರುವುದು ತಿಳಿದಿದೆ. ನನ್ನಕೋರಿಕೆ ನೆರವೇರಿದೆ"** ಎಂದು ಹೇಳಿದ್ದಾನೆ. ಆ ಮಾತುಗಳನ್ನು ಕೇಳಿದ ಗುಣಂಜಯ ಕೂಡ ಸ್ವಾಮಿ ಹತ್ತಿರಕ್ಕೆ ಹೋದರೆ ತನಗಿರುವ ಕೋರಿಕೆಗಳು ನೆರವೇರುತ್ತವೆಂದುಕೊಂಡಿದ್ದಾನೆ. ತಕ್ಷಣಸ್ನಾನ ಮಾಡಿ ಮುಖಕ್ಕೆ ವಿಭೂತಿ, ಕೊರಳಲ್ಲಿ ಮಣಿಸರ ಹಾಕಿಕೊಂಡು, ಭಕ್ತನಂತೆ ಕಾಣಿಸುವ ಕೆಂಪು ವಸ್ತ್ರಗಳನ್ನು ಕಟ್ಟಿಕೊಂಡು, ಸ್ವಾಮಿ ಹತ್ತಿರಕ್ಕೆ ಹೋಗಿ ಸಾಷ್ಟಾಂಗದಂಡ ಪ್ರಣಾಮ ಮಾಡಿದ್ದಾನೆ. ಆತನನ್ನು ನೋಡಿದ ಸ್ವಾಮೀಜಿ **"ಕಾಮ್ಯಾರ್ಥ ಫಲಸಿದ್ಧಿರಸ್ತು"** ಎಂದು ಆಶೀರ್ವದಿಸಿದ್ದಾನೆ. ಜ್ಞಾನ ತಿಳಿಯದ

ಗುಣಂಜಯ ಅದು ಆಶೀರ್ವಾದ ಅಂದುಕೊಂಡಿದ್ದಾನೆ. ಸಂಪೂರ್ಣ ಜ್ಞಾನಿಯಾದ ಸ್ವಾಮೀಜಿ ಆತನ ಅಂತರಂಗದಲ್ಲಿ ಇರುವ ಕೋರಿಕೆಯನ್ನು ಗ್ರಹಿಸಿ ಆ ಮಾತನ್ನು ಹೇಳಿದ್ದಾನೆ. ಸ್ವಾಮಿಯವರ ಹತ್ತಿರಕ್ಕೆ ಬಂದಾಗ ಗುಣಂಜಯ ಮನಸ್ಸಿನಲ್ಲಿ ಯಾರಾದರೂ ಬಹಳಹಣ ತೆಗೆದುಕೊಂಡು ಹೋಗುವ ಯಾತ್ರಿಕನು ಒಂಟಿಯಾಗಿ ಕಾಣಿಸಿದರೆ ಅವನನ್ನು ಯಾಮಾರಿಸಿ ಅವನ ಹಣವನ್ನು ಸುಲಭವಾಗಿ ಹೊಡ್ಕೊಂಡು ತಾನು ಧನಿಕನು ಆಗಬೇಕೆನ್ನುವ ಕೋರಿಕೆ ಇತ್ತು. ನೀನು ಕೋರಿಕೊಂಡ ಕೋರಿಕೆ ಫಲಿತ ನೆರವೇರಬೇಕೆಂದು ಸ್ವಾಮೀಜಿ ಆಶೀರ್ವದಿಸಿದ್ದಾನೆ. ಗುಣಂಜಯ ಕೋರಿಕೊಂಡ ಕೋರಿಕೆ ತನಗೆ ಒಳ್ಳೆಯದಾಗಿ ತೋಚಿದರೂ ಪಾಪ ತಂದಿಡುವುದೇ ಆದ್ದರಿಂದ ಅದು ಕೆಟ್ಟ ಕೋರಿಕೆ. ಕೆಟ್ಟದೇ ನಡೆಯುತ್ತದೆಂದು ಹೇಳಿದ ಸ್ವಾಮೀಜಿ ವಾಕ್ಯ ಗುಣಂಜಯನಿಗೆ ಆಶೀರ್ವಾದವಾಗಿ ಕಾಣಿಸಿದರೂ ಅದು ನಿಜವಾಗಲು ದೂಷಣೆಯೇ ಎಂದು ಆತನಿಗೆ ತಿಳಿದಿಲ್ಲ.

ಕೋರಿಕೊಂಡ ಕೋರಿಕೆಗಳು ಜನ್ಮಾಂತರವಾಗಿ ನೆರವೇರುತ್ತವೆಂದು ಹೇಳಿದಂತೆ ಗುಣಂಜಯನ ಕೋರಿಕೆ ಸ್ವಾಮೀಜಿ ವಾಕ್ಯದ ಪ್ರಕಾರ ಮರುಜನ್ಮದಲ್ಲಿ ನೆರವೇರಿದೆ. ಅದು ಯಾವ ವಿಧವಾಗಿ ನೆರವೇರಿದೆಯೆಂದರೇ! ಗುಣಂಜಯ ಮರು ಜನ್ಮದಲ್ಲಿ ಧನಂಜಯ ಎನ್ನುವ ಹೆಸರು ಹೊಂದಿದ್ದನು. ಒಂದುದಿನ ಆತನು ರೈಲು ಪ್ರಯಾಣ ಮಾಡುತ್ತಿದ್ದನು. ತನ್ನೊಂದಿಗೆ ಪ್ರಯಾಣ ಮಾಡುವವರಲ್ಲಿ ಒಬ್ಬರೊಂದಿಗೆ ಧನಂಜಯನಿಗೆ ರೈಲಿನಲ್ಲಿ ಪರಿಚಯವೇರ್ಪಟ್ಟಿದೆ. ಅವರು ಬಹಳ ದೂರದಿಂದ ಒಂದುದಿನವೆಲ್ಲ ಪ್ರಯಾಣ ಮಾಡುವುದರಿಂದ ಮತ್ತು ಒಂದೇ ಸ್ಟೇಷನ್‌ನಲ್ಲಿ ಇಬ್ಬರು ಇಳಿಯಬೇಕಾದ್ದರಿಂದ ಸ್ವಲ್ಪ ಹೆಚ್ಚಾಗಿ ಸ್ನೇಹದಿಂದ ಇದ್ದರು. ಸಾಯಂಕಾಲ ಆರುಗಂಟೆ ಸಮಯದಲ್ಲಿ ರೈಲುಮಾರ್ಗ ದಲ್ಲಿರುವ ಸೇತುವೆಯ ಲೋಪ ಏರ್ಪಡುವುದರಿಂದ ರೈಲನ್ನು ಸೇತುವೆಯ ಈಕಡೆಯೇ ನಿಲ್ಲಿಸಿದ್ದಾರೆ. ಮಾರ್ಗವನ್ನು ರಿಪೇರಿ ಮಾಡುವುದಕ್ಕೆ ಆ ರಾತ್ರಿಯೆಲ್ಲಾ ಸರಿಹೋಗುತ್ತದೆಂದು ಬೆಳಗಾದ ನಂತರವೇ ರೈಲು ಹೊರಡುತ್ತದೆಂದು ರೈಲ್ವೇ ಸಿಬ್ಬಂದಿ ತಿಳಿಸಿದ್ದಾರೆ. ಧನಂಜಯ ಆತನ ಸಹ ಪ್ರಯಾಣಿಕನು ಇಳಿಯಬೇಕಾದ

ಸ್ಟೇಷನ್ ನಂತರ ಬರುವ ಸ್ಟೇಷನ್ ಆಗಿರುವುದರಿಂದ ಮತ್ತು ಅವರ ಗಮ್ಯ ಕೇವಲ ನಾಲ್ಕು ಕಿಲೋಮಿಟರ್‌ಗಳೇ ಆಗುವುದರಿಂದ ಅವರು ಆ ಸ್ವಲ್ಪ ದೂರವನ್ನು ನಡೆದು ತಲುಪಬೇಕೆಂದು ಕೊಂಡಿದ್ದಾರೆ. ಅವರು ನಡೆಯಬೇ ಕಾಗಿರುವ ಮಾರ್ಗ ಕಾಲುದಾರಿ ಆಗಿರುವುದರಿಂದ, ಅದೂ ಅರಣ್ಯ ಮಾರ್ಗ ವಾಗಿರುವುದರಿಂದ ಸಾಟಿ ಪ್ರಯಾಣಿಕನು ಧನಂಜಯನೊಂದಿಗೆ ನನ್ನ ಹತ್ತಿರ ಐದುಲಕ್ಷ ಹಣವಿದೆ ದಾರಿಯಲ್ಲಿ ಕಳ್ಳರಿರುವುದಿಲ್ಲ ಅಲ್ಲವೆ ಎಂದು ಕೇಳಿದ್ದಾನೆ. ನಾವು ಬರುತ್ತೇವೆಂದು ಯಾರಿಗೆ ಗೊತ್ತು? ನಿನ್ನ ಹತ್ತಿರ ಹಣವಿದೆಯೆಂದು ಯಾರಿಗೆ ಗೊತ್ತು? ಕತ್ತಲಾಗದ ಮುನ್ನವೇ ಊರು ಸೇರಬಹುದೆಂದು ಉತ್ತರವಾಗಿ ಧನಂಜಯ ಹೇಳಿದ್ದಾನೆ. ಹತ್ತಿರ ಅಲ್ಲವೇ ಹೊರಟುಹೋಗಬಹುದು ಇಲ್ಲದಿದ್ದರೆ ರಾತ್ರಿಯೆಲ್ಲ ರೈಲಿನಲ್ಲಿ ಜಾಗರಣೆ ತಪ್ಪುವುದಿಲ್ಲವೆಂದು ಅಂದುಕೊಂಡಿದ್ದಾರೆ ಕೊನೆಗೆ ಕಾಲ್ನಡಿಗೆಯಲ್ಲಿ ಹೋಗಬೇಕೆಂದುಕೊಂಡಿದ್ದಾರೆ. ಇಬ್ಬರೂ ರೈಲು ಇಳಿದು ನಡೆಯಲು ಪ್ರಾರಂಭಿಸಿದ್ದಾರೆ. ಒಂದು ಕಿಲೋಮೀಟರ್ ನಡೆದ ನಂತರ ಧನಂಜಯ ತಲೆಯಲ್ಲಿ ಆಲೋಚನೆಗಳು ಶುರುವಾದವು. ಪೂರ್ವದಲ್ಲಿ ಕೋರಿಕೊಂಡ ಕೋರಿಕೆ ಪ್ರಕಾರ ಸ್ವಾಮೀಜಿ ಕೊಟ್ಟ ಆಶೀರ್ವಾದದ ಪ್ರಕಾರ ಆತನಲ್ಲಿ ಪ್ರೇರೇಪಣೆ ಶುರುವಾಗಿದೆ. ಈತನ ಹತ್ತಿರ ಹಣ ಇರುವುದು ನನಗೊಬ್ಬನಿಗೆ ತಿಳಿದಿದೆ, ಈ ಮಾರ್ಗದಲ್ಲಿ ಈತನು ನನ್ನಿಂದೆ ಬರುವುದು ನನಗೊಬ್ಬನಿಗೆ ತಿಳಿದಿದೆ, ಈತನಿಂದ ಹಣವನ್ನು ಯಾವುದೊ ಒಂದು ವಿಧವಾಗಿ ಕಸಿದುಕೊಂಡರೆ ಒಂದೇಸಲಕ್ಕೆ ಧನಿಕನಾಗಬಹುದೆಂದುಕೊಂಡಿದ್ದಾನೆ. ಅದಕ್ಕೋಸ್ಕರ ನಡೆಯುತ್ತಲೇ ಪ್ರಣಾಳಿಕೆಯನ್ನು ತಯಾರುಮಾಡಿಕೊಂಡು ಸಾಗಿದನು. ಅಷ್ಟರಲ್ಲಿಯೇ ಆತನಿಗೊಂದು ಆಲೋಚನೆ ತಲೆಯಲ್ಲಿ ಹೊಳೆದಿದೆ. ಅದು ಅರಣ್ಯಮಾರ್ಗ ವಾದ್ದರಿಂದ ಬಹಳ ವಿಧಗಳ ಮರಗಳಿವೆ ಅವುಗಳಲ್ಲಿ ವಿಷಮುಷ್ಠಿ ಗಿಡ ಅದಕ್ಕೆ ಕಾಯಿಗಳಿರುವುದು ಕಾಣಿಸಿದೆ. ಕೆಂಪಗೆ ಸುಂದರವಾಗಿ ಕಾಣಿಸಿದ ಆ ಕಾಯಿಯನ್ನು ಆತನ ಕೈಯಿಂದ ತಿನಿಸಿದರೆ ತನ್ನ ಕೆಲಸ ನೆರವೇರುತ್ತದೆಂದು ಕೊಂಡಿದ್ದಾನೆ. ತಕ್ಷಣ ಧನಂಜಯ ಸಾಟಿ ಪ್ರಯಾಣಿಕನಿಗೆ ಕಾಯಿಯನ್ನು ತೋರಿಸಿ ಈ ಕಾಯಿ ಇಲ್ಲಿ ಹೊರತು ಎಲ್ಲಿಯೂ ಸಿಗುವುದಿಲ್ಲ,

ಈ ಕಾಯಿ ಹೆಸರು ಮುಷ್ಠಿಕಾಯಿ, ಇದನ್ನು ತಿನ್ನುವುದರಿಂದ ಮುಷ್ಠಿಬಲ ಏರ್ಪಡುತ್ತದೆ. ವೃದ್ಧಾಪ್ಯದವರೆಗು ಗಂಡಸುತನ ಕ್ಷೀಣಿಸದೆ ಇರುತ್ತದೆ. ಇದರಿಂದ ಸಂಪೂರ್ಣ ಆರೋಗ್ಯ ಏರ್ಪಡುತ್ತದೆ. ನಮ್ಮ ಅದೃಷ್ಟ ಈ ಗಿಡ ಕಾಣಿಸಿದೆ, ಇದನ್ನು ತಪ್ಪದೆ ತಿನ್ನೋಣ ವೆಂದು ಹೇಳಿದಾಗ ಆ ಮಾತಿಗೆ ಪ್ರಯಾಣಿಕನು ಕೂಡ ಒಪ್ಪಿಕೊಂಡಿದ್ದಾನೆ. ಉಳಿದವರಿಗಿಂತ ನನ್ನಲ್ಲಿ ಗಂಡಸುತನ ಕಡಿಮೆ ಇದೆಯೆಂದು ಆ ಪ್ರಯಾಣಿಕನಿಗೆ ಮೊದಲಿನಿಂದ ಅನುಮಾನ ಇರುವುದರಿಂದ ಗಂಡಸುತನ ಕುರಿತು ಹೇಳುತ್ತಲೇ ಸರಿಯೆಂದು ಕಾಯಿಯನ್ನು ತಿನ್ನುವುದಕ್ಕೆ ಆಸಕ್ತಿಯನ್ನು ತೋರಿಸಿದ್ದಾನೆ.

ಇದೇ ಒಳ್ಳೆಯ ಸಮಯವೆಂದು ತಿಳಿದ ಧನಂಜಯ ತಕ್ಷಣ ಮರವನ್ನತ್ತಿ ಚೆನ್ನಾಗಿ ಕೆಂಪಗೆ ಕಾಣಿಸಿದ ಒಂದು ಕಾಯನ್ನು ಕಿತ್ತು ಕೆಳಗೆ ಹಾಕಿದ್ದಾನೆ. ತಾನು ಕೂಡ ಮತ್ತೊಂದು ಕಾಯನ್ನು ತೆಗೆದುಕೊಂಡು ಕೆಳಗೆ ಇಳಿದುಬಂದು ಮೊದಲು ಒಂದು ಕಾಯನ್ನು ಹೊಡೆದು ಅದರಲ್ಲಿನ ಬೀಜಗಳನ್ನು ತೆಗೆದುಹಾಕಿ ತೊಗಟೆಯನ್ನು ಪ್ರಯಾಣಿಕನಿಗೆ ತಿನಿಸಿದ್ದಾನೆ. ನಂತರ ತಾನುಕೂಡ ಕಾಯನ್ನು ಹೊಡೆದು ತಿನ್ನುವಂತೆ ಬಾಯಿಯಲ್ಲಿ ಇಟ್ಟುಕೊಂಡು ಮೂತ್ರವಿಸರ್ಜನೆಗಾಗಿ ಪಕ್ಕಕ್ಕೆ ಹೋಗಿ ಬಾಯಿಯಲ್ಲಿನ ತೊಗಟೆಯನ್ನು ಕೆಳಗೆ ಊಗಿದು ತಿನ್ನುತ್ತಿರುವಂತೆ ಬಾಯನ್ನು ಕದಲಿಸುತ್ತಾ ಪ್ರಯಾಣಿಕನ ಮುಂದಕ್ಕೆ ಬಂದನು. ಧನಂಜಯ ತಿನ್ನುತ್ತಿದ್ದಾನಾ ಇಲ್ಲವಾ ಎಂದು ಗ್ರಹಿಸದ ಪ್ರಯಾಣಿಕನು ತಾನು ಮಾತ್ರ ಕಾಯೆಲ್ಲವನ್ನು ತಿಂದನು. ತಿಂದನಂತರ ಪುನಃ ಅವರು ಪ್ರಯಾಣ ಸಾಗಿಸಿದರು. ಒಂದು ಕಿಲೋಮೀಟರ್ ಕೂಡ ನಡೆಯದೇ ಪ್ರಯಾಣಿಕನಿಗೆ ಮತ್ತೇರಿದೆ. ಸಾರಾಯಿ ಕುಡಿದ ಮತ್ತಿನಂತೆ ಇರುವುದರಿಂದ ಆತನು ತೂಗುತ್ತಾ ನಡೆಯತೊಡಗಿದನು. ಸ್ವಲ್ಪ ಸಮಯಕ್ಕೆ ನಶೆ ಹೆಚ್ಚಾಗಿ ನಡೆಯಲಾರದೆ ಕುಳಿತುಕೊಂಡನು. ಧನಂಜಯ ಕೂಡ ನಶೆ ಏರಿದವನಂತೆ ನಟಿಸುತ್ತಾ ಹೊಸದಾಗಿ ತಿಂದವರಿಗೆ ಮೊದಲು ಸ್ವಲ್ಪ ಹೆಚ್ಚಾಗಿ ನಶೆ ಕಾಣಿಸುತ್ತದೆ ಏನು ಪರವಾಗಿಲ್ಲ ಐದು ನಿಮಿಷಗಳು ಕುಳಿತುಕೊಂಡು ಹೋಗೋಣವೆಂದು ಹೇಳಿ ಆತನನ್ನು

ಕುಳಿತುಕೊಳ್ಳಲು ಹೇಳಿದನು. ಪಾಪ ಪ್ರಯಾಣಿಕನಿಗೆ ಮತ್ತಷ್ಟು ನಶೆ ಹೆಚ್ಚಾಗುವು ದರಿಂದ ಕುಳಿತುಕೊಂಡ ಸ್ಥಳದಲ್ಲಿಯೇ ಮಲಗಿದನು. ಮಲಗಿರುವವನು ನಿದ್ರಯೊಳಗೆ ಜಾರಿಕೊಂಡಾಗ ಧನಂಜಯ ಕೋರಿಕೆ ನೆರವೇರಿದೆ. ಇದೇ ಸಮಯವೆಂದು ಪ್ರಯಾಣಿಕನ ಹತ್ತಿರವಿರುವ ಸೂಟ್‌ಕೇಸ್‌ನ್ನು ತೆಗೆದುಕೊಂಡು ಅದರ ಬೀಗಗಳನ್ನು ಕೂಡ ಆತನ ಹತ್ತಿರ ಹುಡುಕಿ ತೆಗೆದುಕೊಂಡಿದ್ದಾನೆ. ತಕ್ಷಣ ಸೂಟ್‌ಕೇಸ್‌ನನ್ನು ತೆರೆದು ಅದರಲ್ಲಿನ ಹಣವನ್ನು ತೆಗೆದುಕೊಂಡು ತನ್ನ ಹತ್ತಿರವಿರುವ ಚೀಲದಲ್ಲಿ ಹಾಕಿಕೊಂಡು ಪುನಃ ಸೂಟ್‌ಕೇಸ್‌ನ್ನು ಮುಚ್ಚಿ ಆತನ ಹತ್ತಿರವೇ ಇಟ್ಟು ಬೀಗಗಳು ಕೂಡ ಆತನ ಜೇಬಿನಲ್ಲಿ ಹಾಕಿ ಅಲ್ಲಿಂದ ಹೊರಟು ಹೋದನು. ಪ್ರಯಾಣಿಕನು ವಿಷಮುಷ್ಠಿ ಕಾಯನ್ನು ತಿನ್ನುವುದರಿಂದ ನಶೆ ಹೆಚ್ಚಾಗಿ ಅಪಸ್ಮಾರಕಸ್ಥಿತಿಯಲ್ಲಿ ಸ್ವಲ್ಪಸಮಯವಿದ್ದು ಅರ್ಧಗಂಟೆಯೊಳಗೆ ಮರಣಿಸಿದನು.

ಗುಣಂಜಯ ಕೋರಿಕೊಂಡ ಕೋರಿಕೆ ಸ್ವಾಮಿ ಆಶೀರ್ವದಿಸಿದ ಆಶೀರ್ವಾದದ ಪ್ರಕಾರ ಮರುಜನ್ಮದಲ್ಲಿ ಧನಂಜಯ ರೂಪದಲ್ಲಿ ನೆರವೇರಿದೆ. ಆದರೆ ನಡೆದ ಕಾರ್ಯದಲ್ಲಿ ಪಾಪ ಕರ್ಮರೂಪವಾಗಿ ಧನಂಜಯ ತಲೆಯಲ್ಲಿ ಕರ್ಮದಲ್ಲಿ ಸೇರಿಹೋಗಿದೆ. ಗುಣಂಜಯ ರೂಪದಲ್ಲಿ ಹೊಂದಿರುವುದು ಆಶೀರ್ವಾದದ ರೂಪದಲ್ಲಿರುವ ಕೆಟ್ಟದನ್ನು ಕೈಗೂಡಿಸುವ ಬೈಗಳೆಂದು ತಿಳಿದಿದೆ. ಇಲ್ಲಿ ಜ್ಞಾನ ಇಲ್ಲದಿರುವುದರಿಂದ ಬೈಗಳನ್ನು ಆಶೀರ್ವಾದವಾಗಿ ಅರ್ಥ ಮಾಡಿಕೊಳ್ಳುವುದು ನಡೆದಿದೆಯೆಂದು ತಿಳಿಯುತ್ತಿದೆ.

# ಇಷ್ಟಾರ್ಥ ಫಲಸಿದ್ಧಿರಸ್ತು

ಈ ಪದ್ಧತಿ ಪ್ರಕಾರವೇ ಮತ್ತೆ ಕೆಲವು ಬೈಗಳನ್ನು ಈದಿನ ಆಶೀರ್ವಾದ ರೂಪಗಳಲ್ಲಿ ಅಲ್ಲಲ್ಲಿ ಕೇಳಿಸುತ್ತಿವೆ. ಅವುಗಳಲ್ಲಿ **“ಇಷ್ಟಾರ್ಥ ಫಲಸಿದ್ಧಿರಸ್ತು”** ಎನ್ನುವ ಒಂದನ್ನು ವಿವರಿಸಿಕೊಳ್ಳೋಣ. ಮಾನವನಿಗೆ ಇಷ್ಟ ಎರಡು ವಿಧಗಳಾಗಿ

ಇರುತ್ತದೆ. ಇಷ್ಟ ಎನ್ನುವುದು ಮಾನವನಿಗಿರುವ ಗುಣ ಅಲ್ಲವೇ ಅಲ್ಲ. ಹಾಗೆಂದು ಜ್ಞಾನವೂ ಅಲ್ಲ. ಗುಣಗಳಬಗ್ಗೆ ಇರುವ ಶ್ರದ್ಧೆಯನ್ನು ಇಷ್ಟ ಎನ್ನುತ್ತಿದ್ದೇವೆ. ಗುಣಗಳು ಪ್ರಪಂಚ ವಿಷಯಗಳಿಗೆ ಸಂಬಂಧಿಸಿರುವವು, ಆದ್ದರಿಂದ ಗುಣಗಳಲ್ಲಿರುವ ಶ್ರದ್ಧೆಯನ್ನು ವಿಷಯ ಶ್ರದ್ಧೆಯೆಂದು ಕರೆಯುತ್ತಿದ್ದೇವೆ. ಅದೇ ವಿಧವಾಗಿ ಗುಣಗಳ ಸಂಬಂಧ ಇಲ್ಲದೇ ದೈವಜ್ಞಾನದ ಮೇಲಿರುವ ಇಷ್ಟವನ್ನು ಜ್ಞಾನಶ್ರದ್ಧೆ ಎನ್ನುತ್ತಿದ್ದೇವೆ. ಈ ವಿಧವಾಗಿ ಒಂದು ವಿಷಯಶ್ರದ್ಧೆ, ಎರಡು ಜ್ಞಾನಶ್ರದ್ಧೆಯೆಂದು ಒಟ್ಟು ಎರಡು ವಿಧಗಳು ಇವೆ. ಮನುಷ್ಯನಿಗೆ **'ಶ್ರದ್ಧೆ' ಅಥವಾ 'ಇಷ್ಟ'** ಎನ್ನುವುದು ಗುಣವಲ್ಲ, ಆದ್ದರಿಂದ ಅದು ಕರ್ಮವನ್ನನುಸರಿಸಿ ಬಂದಿರುವುದಲ್ಲ. ಮಾನವನಿಗೆ ಜನ್ಮತಃ ಬಂದಿರುವ ಹಕ್ಕು ಶ್ರದ್ಧೆ. ಮನುಷ್ಯನ ವಿಷಯಶ್ರದ್ಧೆಯನ್ನಾಗಲಿ ಅಥವಾ ಜ್ಞಾನಶ್ರದ್ಧೆಯನ್ನಾಗಲಿ ಸ್ವತಃವಾಗಿ ಯಾವಕರ್ಮ ಪ್ರಮೇಯ ಇಲ್ಲದಂತೆ ಉಂಟಾಗಿರಬಹುದು. ಜ್ಞಾನಶ್ರದ್ಧೆಯನ್ನು ಅನುಸರಿಸಿ ಜ್ಞಾನ ಲಭಿಸುತ್ತದೆ, ಆದ್ದರಿಂದ **'ಶ್ರದ್ಧಾವಾನ್ ಲಭತೇ ಜ್ಞಾನಮ್'** ಎಂದು ಭಗವದ್ಗೀತೆಯಲ್ಲಿ ಹೇಳಿದ್ದಾರೆ. ಜ್ಞಾನ ಶ್ರದ್ಧೆ ಇರುವವನಿಗೆ ಶ್ರದ್ಧೆಯನ್ನನುಸರಿಸಿ ಜ್ಞಾನ ಲಭಿಸುತ್ತದೆ ಆದರೆ, ವಿಷಯಶ್ರದ್ಧೆಯನ್ನನುಸರಿಸಿ ವಿಷಯಗಳು ನೆರವೇರುತ್ತವೆಂದುಕೊಳ್ಳಬಾರದು. ಕರ್ಮಲಿಖಿತದಲ್ಲಿ ಜ್ಞಾನವಿರುವುದಿಲ್ಲ, ಆದ್ದರಿಂದ ಶ್ರದ್ಧೆ ಇರುವಷ್ಟು ಜ್ಞಾನ ಲಭಿಸುತ್ತದೆ. ಕರ್ಮಲಿಖಿತದಲ್ಲಿ ವಿಷಯಪ್ರಾಪ್ತ ಅಪ್ರಾಪ್ತಗಳಿರುತ್ತವೆ, ಆದ್ದರಿಂದ ಶ್ರದ್ಧೆ ಇದ್ದಷ್ಟು ಮಾತ್ರಕ್ಕೆ ವಿಷಯಗಳು ನೆರವೇರುತ್ತವೆನ್ನುವುದಕ್ಕೆ ಸಾಧ್ಯವಿಲ್ಲ. ಉದಾಹರಣೆಗೆ ಒಬ್ಬನಿಗೆ ಆಹಾರಪದಾರ್ಥ ಗಳಿಗೆಲ್ಲಾ ಲಡ್ಡಿನಮೇಲೆ ಹೆಚ್ಚಾಗಿ ಇಷ್ಟ ಇರಬಹುದು. ಆದಷ್ಟಮಾತ್ರಕ್ಕೆ ಲಡ್ಡು ಅವನಿಗೆ ಲಭಿಸುತ್ತದೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಯಾವ ಹೊತ್ತಿಗೆ ಯಾವ ಆಹಾರ ತಿನ್ನಬೇಕೆಂದು ಕರ್ಮಪ್ರಕಾರ ಬರೆಯಲ್ಪಟ್ಟಿರುತ್ತದೋ ಆ ವಿಧವಾಗಿಯೇ ಅವನಿಗೆ ಆಹಾರ ಲಭಿಸುತ್ತದೆ. ಇದನ್ನನುಸರಿಸಿ ಶ್ರದ್ಧೆ ಎರಡು ವಿಧಗಳಿದ್ದರೂ ಒಂದು ಕರ್ಮಾತೀತವಾಗಿ ನೆರವೇರುವುದಾಗಿ ಇದೆ, ಎರಡನೆಯದು ಕರ್ಮಾಧೀನವಾಗಿ ನೆರೆವೇರುತ್ತದೆಂದು ಹೇಳುವುದಕ್ಕೆ ಸಾಧ್ಯವಿಲ್ಲದ್ದಾಗಿ ಇದೆ. ಇಷ್ಟಾರ್ಥ ಎಂದಾಗ ಶ್ರದ್ಧೆಯನ್ನನುಸರಿಸಿ ಎನ್ನುವ ಅರ್ಥಬರುತ್ತದೆ. **"ಇಷ್ಟಾರ್ಥ**

**ಫಲಸಿದ್ಧಿರಸ್ತು"** ಎಂದಾಗ ಶ್ರದ್ಧೆಯನ್ನನುಸರಿಸಿ ಫಲ ಸಿದ್ಧಿಸಬೇಕೆಂದು ಹೇಳುವುದು. ನಿನ್ನ ಶ್ರದ್ಧೆಯನ್ನನುಸರಿಸಿ ಫಲ ಉಂಟಾಗುತ್ತದೆಂದು ಹಿರಿಯರು ಹೇಳಿದರೂ ಆ ವಾಕ್ಯ ಆಶೀರ್ವಾದವಾಗಿ ಬದಲಾಗಬಹುದು ಅಥವಾ ದೂಷಣೆಯಾಗಿಯೂ ಬದಲಾಗಬಹುದು. ಒಂದೇ ವಾಕ್ಯ ಆಶೀರ್ವಾದವಾಗಿ ಮತ್ತು ದೂಷಣೆಯಾಗಿ ಹೇಗೆ ಬದಲಾಗುತ್ತಿದೆ ಎಂದರೆ! ಒಬ್ಬ ಮನುಷ್ಯನಿಗೆ ಜ್ಞಾನದ ಮೇಲೆ ಶ್ರದ್ಧೆ ಇರುವಾಗ ಹಿರಿಯರು ಆತನಿಗೆ ಕೊಟ್ಟಿರುವ ವಾಕ್ಯ ಆಶೀರ್ವಾದವಾಗಿ ಬದಲಾಗುತ್ತದೆ. ಏಕೆಂದರೆ ಅವನಿಗೆ ಲಭಿಸುವುದು ಜ್ಞಾನ, ಆದ್ದರಿಂದ ಶುಭವನ್ನು ಕೈಗೂಡಿಸುವ ವಾಕ್ಯವಾದ್ದರಿಂದ ಅದನ್ನು ಆಶೀರ್ವಾದ ಎನ್ನಬಹುದು. ಜ್ಞಾನವನ್ನು ಕುರಿತು ಆಶೀರ್ವದಿಸದಿದ್ದರೂ ಆತನಿಗೆ ಹೇಗಾದರು ಜ್ಞಾನವೇ ಲಭಿಸುತ್ತದೆ. ಆಶೀರ್ವದಿಸಿದರೆ ಅವನಿಗೆ ಆಶೀರ್ವಾದದ ಬಲ ಕೂಡ ಕೈಗೂಡುತ್ತದೆ. ಒಂದು ವೇಳೆ ಮನುಷ್ಯನಿಗಿರುವ ಶ್ರದ್ಧೆ ವಿಷಯಶ್ರದ್ಧೆ ಆದರೆ, ಅದು ನೆರವೇರಬೇಕೆಂದು ಆಶೀರ್ವದಿಸಿದರೂ ಅದು ಮರುಜನ್ಮದಲ್ಲಿ ನೆರವೇರಿದರೂ, ಪ್ರಪಂಚ ವಿಷಯಗಳಲ್ಲಿ ಸೇರಿಹೋಗುವುದೇ, ಆದ್ದರಿಂದ ಅದು ಆಶೀರ್ವಾ ದವಾಗಿ ಕಾಣಿಸಿದರೂ ವಾಸ್ತವವಾಗಿ ಅದನ್ನು ದೂಷಣೆ ಎಂದೇ ಹೇಳಬಹುದು. **"ಇಷ್ಟಾರ್ಥ ಫಲಸಿದ್ಧಿರಸ್ತು"** ಎನ್ನುವ ವಾಕ್ಯವೊಂದು ಮಾತ್ರ ಒಂದು ಸಮಯದಲ್ಲಿ ಆಶೀರ್ವಾದವಾಗಿ, ಮತ್ತೊಂದುಸಲ ಬೈಗಳಾಗಿ ಬದಲಾಗುವುದಕ್ಕೆ ಅವಕಾಶವಿದೆ. ಇಷ್ಟ ಎಂದರೂ ಶ್ರದ್ಧೆ ಎಂದರೂ ಎರಡು ಒಂದೇ, ಹಾಗೆಯೇ ಆಸೆ ಎಂದರೂ ಕಾಮ ಎಂದರೂ ಎರಡು ಒಂದೇ. ಆದ್ದರಿಂದ ಇಷ್ಟಾರ್ಥಕ್ಕು ಕಾಮ್ಯಾರ್ಥಕ್ಕು ಎಷ್ಟೋ ವ್ಯತ್ಯಾಸವಿದೆ. ಇಷ್ಟ ಜೀವಿಗಿರುವ ಸ್ವಂತ ಹಕ್ಕು ಆಗಿದ್ದು, ಆಸೆ ಗುಣಚಕ್ರದಲ್ಲಿರುವ ಮೊದಲಗುಣ. ಗುಣಗಳಿಗು ಸಂಬಂಧಿಸಿದ ಹಕ್ಕು ಏನಾದರೂ ವಾಸ್ತವವಾಗಿ ದೂಷಣೆ ಆಗುತ್ತದೆ. ಹಾಗೆಯೇ ಜ್ಞಾನಕ್ಕೆ ಸಂಬಂಧಿಸಿದ ಹಕ್ಕು ಯಾವುದಾದರೂ ವಾಸ್ತವವಾಗಿ ಆಶೀರ್ವಾದವಾಗುತ್ತದೆ. ಗುಣಗಳಿಗೆ ಸಂಬಂಧಿಸಿರುವವು ಯಾವಾದರೂ ವಿಷಯಸುಖಗಳಲ್ಲಿ ಮುಳುಗಿಸುತ್ತದೆಂದು, ಮಾನವನಿಗೆ ಕೆಟ್ಟದನ್ನು ಕೈಗೂಡಿಸುವವು, ಕರ್ಮವನ್ನು ಮೂಟೆ ಕಟ್ಟುವವಾದ್ದರಿಂದ ಅವುಗಳನ್ನು ದೂಷಣೆಗಳೆಂದೇ ಹೇಳಬಹುದು. ಜ್ಞಾನಕ್ಕೆ ಸಂಬಂಧಿಸಿರುವವು

ಯಾವಾದರೂ ವಿಷಯಗಳಿಂದ ಕಡೆಗಾಣಿಸುವವು, ಮಾನವನಿಗೆ ಶುಭವನ್ನು ಕೈಗೂಡಿಸುವವು, ಕರ್ಮಗಳಿಂದ ವಿಮುಕ್ತಿ ಗೊಳಿಸುವವಾಗಿರುತ್ತವೆ. ಆದ್ದರಿಂದ ಅವುಗಳನ್ನು ಆಶೀರ್ವಾದಗಳೆಂದೇ ಹೇಳಬಹುದು. ಗುಣ ವಿಷಯಗಳಿಗೆ ಸಂಬಂಧಿಸಿ ಆಶೀರ್ವಾದಗಳಂತೆ ಇರುವ ದೂಷಣೆಗಳಲ್ಲಿ ಮತ್ತೊಂದನ್ನು ಕೆಳಗೆ ನೋಡೋಣ.

# ಕಲ್ಯಾಣ ಪ್ರಾಪ್ತಿರಸ್ತು

ಮಾವನ ಜೀವನದಲ್ಲಿ ವಿವಾಹ ಒಂದು ದೊಡ್ಡ ತಿರುವಿನಂಥದ್ದು. ಒಂದು ವಿಧವಾಗಿ ಯೋಚಿಸಿದರೆ ಮತ್ತೊಬ್ಬ ಮನುಷ್ಯನೊಂದಿಗೆಕೂಡಿ ಬದುಕುವುದಕ್ಕೆ ಒಪ್ಪಂದದಿಂದ ಕೂಡಿಕೊಂಡ ದಿನ ವಿವಾಹ. ಮತ್ತೊಂದು ವಿಧವಾಗಿ ಯೋಚಿಸಿದರೆ ತನ್ನ ಸ್ವೇಚ್ಛೆಗೆ ಆತಂಕಗಳನ್ನು ಕೊಂಡುತಂದುಕೊಳ್ಳುವ ದಿನ ವಿವಾಹ. ಇನ್ನೊಂದು ವಿಧವಾಗಿ ಯೋಚಿಸಿದರೆ ಮಾಯಾಸರ್ಪವನ್ನು ತನ್ನ ಕೊರಳಲ್ಲಿ ತಗಲಿಸಿಕೊಂಡ ಮೊದಲದಿನವೇ ವಿವಾಹ. ಜೀವನದಲ್ಲಿ ಅಡೆತಡೆಗಳ ಪ್ರಯಾಣಕ್ಕೆ ಪ್ರಾರಂಭವೇ ವಿವಾಹ. ಮನುಷ್ಯ ಎಷ್ಟೋ ವಿಷಯಗಳಲ್ಲಿ **ರಕ್ತಿ ವಿರಕ್ತಿಯನ್ನು** ಹೊಂದುವುದಕ್ಕೆ ಅವಕಾಶವಿರುವ ಸಂಸಾರ ಜೀವನಕ್ಕೆ ಆರಂಭವೇ ವಿವಾಹ. ಅಜ್ಞಾನ ಜೀವನಕ್ಕೆ ನಾಂದಿ ಹೇಳುವುದೇ ವಿವಾಹ. ಆದ್ದರಿಂದ ವಿವಾಹದಿನದಂದು ಮನುಷ್ಯನಿಗೆ ಬೇಕಾದ ದೈವಸಂದೇಶಗಳೆಲ್ಲ ತಿಳಿಸಿ ಅವನನ್ನು ಜಾಗೃತಪಡಿಸುವುದು ನಡೆಯುತ್ತಿದೆ. ವಿವಾಹವನ್ನು ಮದುವೆ ಎಂದು ಕರೆಯುವುದು ಕೂಡ ಜ್ಞಾನಸಂದೇಶವೇ. ಮದುವೆ ಎನ್ನುವ ಹೆಸರಿಟ್ಟು ಆ ದಿನ ಮಾಡುವ ಪ್ರತಿಕಾರ್ಯ ದೈವಜ್ಞಾನದಿಂದ ಸಮ್ಮೇಳನವಾಗಿ ಇರುವಂತೆ ಪೂರ್ವದಲ್ಲಿ ಹಿರಿಯರು ಏರ್ಪಡಿಸಿದ್ದಾರೆ. ಆದರೂ ಮಾಯೆ ಪ್ರಭಾವದಿಂದ ದೈವಜ್ಞಾನ ತಿಳಿಯದೆಹೋಗಿದೆ, ಕೆಲವು ಕಾರ್ಯಗಳು ಮಾತ್ರ ಅರ್ಥಹೀನವಾಗಿ ನಿಂತಿವೆ. ಮಾನವಜೀವನದಲ್ಲಿ ಅತಿ ಮುಖ್ಯವಾದ ಮದುವೆದಿನದಂದು ಜ್ಞಾನದ ಮೇಲೆ ಧ್ಯಾಸವಿಲ್ಲದೆ ಹೋಗುತ್ತಿರುವುದು ಖಗೋಳದಲ್ಲಿನ ಗ್ರಹಗಳರೂಪ

ಗಳಲ್ಲಿರುವವರಿಗೆ ಆಗ್ರಹವನ್ನು ಉಂಟುಮಾಡುತ್ತಿವೆ. ಆದ್ದರಿಂದ ಮದುವೆ ಪ್ರಯಾಣ ಮಾಡುವ ವಾಹನಗಳು ಪ್ರಮಾದಕ್ಕೆ ಗುರಿಮಾಡುತ್ತಿದ್ದಾರೆ. ಮಾನವನ ಹೃದಯದಲ್ಲಿ ಜ್ಞಾನವನ್ನು ಮದುವೆ ಕಾರ್ಯಗಳ ಮೂಲಕ ಪ್ರತಿಷ್ಠಿಸಿಕೊಳ್ಳಬೇಕಾಗಿರುವಾಗ ಆ ದಿನವನ್ನು ವಿಲಾಸವಾಗಿ ಕಳೆಯುವುದು, ಒಡವೆಗಳು, ಖರೀದಾದ ವಸ್ತ್ರಗಳು ಧರಿಸಿ ಧರ್ಪತೋರಿಸುವುದು ಜ್ಞಾನದಬೆಲೆ ತಿಳಿದ ಸೂಕ್ಷ್ಮಗ್ರಹಗಳಿಗೆ ಸರಿಹೋಗುವುದಿಲ್ಲ. ಆದ್ದರಿಂದ ವಿವಾಹ ಕಾರ್ಯಗಳಲ್ಲಾಗಲಿ ಪ್ರಯಾಣಗಳಲ್ಲಾಗಲಿ ಅಪಘಾತಗಳು ಉಂಟುಮಾಡುವುದಕ್ಕೆ ಗ್ರಹಗಳು ಕಾದಿರುತ್ತಾರೆ. ಆದ್ದರಿಂದಲೇ ಚೆನ್ನಾಗಿ ಪರಿಶೀಲಿಸಿದರೆ ಮದುವೆ ವಾಹನಗಳೇ ಹೆಚ್ಚಾಗಿ ಪ್ರಮಾದಕ್ಕೆ ಗುರಿಯಾಗುತ್ತಿರುತ್ತವೆ.

ಮದುವೆದಿನದಂದು ಮದುವೆಕಾರ್ಯಗಳಲ್ಲಿ ಜ್ಞಾನವನ್ನು ತಿಳಿಸಿದರೂ, ತಿಳಿಸದಿದ್ದರೂ ಮಾನವನು ಅಜ್ಞಾನದಕಡೆ ಪ್ರಯಾಣಿಸುತ್ತಿದ್ದಾನೆ. ಆ ದಿನದಿಂದ ಮಾಯೆಯಲ್ಲಿ ಪೂರ್ತಿಯಾಗಿ ಮುಳುಗಿಹೋಗುತ್ತಿದ್ದಾನೆ. ಆದ್ದರಿಂದ ವಿವಾಹ ಮಾನವನಿಗೆ ಅಶುಭವನ್ನು ಕೈಗೂಡಿಸುವುದೆ ಆಗುತ್ತಿದೆ. ಆದ್ದರಿಂದ **"ಕಲ್ಯಾಣ ಪ್ರಾಪ್ತಿರಸ್ತು"** ಎಂದು ಯಾರಾದರೂ ಈಗಿನಕಾಲದಲ್ಲಿ ಆಶೀರ್ವದಿಸಿದರೂ ಅದು ಕೆಟ್ಟದ್ದನ್ನು ಮಾಡುವುದೇ ಆಗಿರುವುದರಿಂದ ಅದನ್ನು ವಾಸ್ತವವಾಗಿ ದೂಷಣೆಕೆಳಗೆ ಲೆಕ್ಕಿಸಿಕೊಳ್ಳಬೇಕಾಗಿದೆ. **'ಶ್ರೀಘ್ರಮೇವ ಕಲ್ಯಾಣ ಪ್ರಾಪ್ತಿರಸ್ತು'** ಎನ್ನುವುದರಲ್ಲಿ ಬೇಗನೆ ವಿವಾಹ ಆಗಬೇಕೆಂಬ ಅರ್ಥವಿದೆ. ವಿವಾಹವಾಗುವುದರಿಂದ ಅಶಾಂತಿ ಪ್ರಾರಂಭವಾಗುತ್ತದೆ, ಆದ್ದರಿಂದ ಈದಿನ ಇರುವ ಆ ಆಶೀರ್ವಾದವನ್ನು ಬೈಗಳೊಳಗೆ ಲೆಕ್ಕಿಸಬೇಕಾಗಿದ್ದೆ. ಕೆಲವರ ಜೀವನಗಳಲ್ಲಿ ವಿವಾಹಜೀವನ ಮೊದಲು ಸಂತೋಷದಿಂದ ಕೂಡಿಕೊಂಡ ಜೀವನವಾಗಿಯೇ ಕಾಣಿಸಿದರೂ ಅದು ದೇವರಿಗೆ ದೂರಮಾಡುವುದಾಗಿ ಕೊನೆಗೆ ಜೀವನಕ್ಕೇ ಅನರ್ಥವನ್ನು ಕೈಗೂಡಿಸುತ್ತಿದೆ. ಆದ್ದರಿಂದ ಮದುವೆ ದಿನವೇ ಎಷ್ಟೋ ಜ್ಞಾನದಿಂದ ಕೂಡಿಕೊಂಡ **ಮದುವೆ, ಬಾಷಿಂಗಗಳು, ತಲಂಬರಗಳು, ಅಕ್ಷತೆಗಳು, ತಾಳಿ, ಮಂಟಪ, ಅರುಂಧತಿ ನಕ್ಷತ್ರ** ಮೊದಲಾದ ಕಾರ್ಯಗಳಲ್ಲಿ ಅಂತರಾರ್ಥ

ವನ್ನು ತಿಳಿದು ವೈವಾಹಿಕ ಜೀವನ ಪ್ರಾರಂಭಿಸಿದರೆ ಆ ಜೀವನ ಶುಭಪ್ರದ ವಾಗುವುದು, ಮದುವೆ ದಿನದಂದು ಅಂತಹ ಜ್ಞಾನಪದ್ಧತಿ ಹೇಳುವವರಾಗಲಿ, ಕೇಳುವವರಾಗಲಿ ಇಲ್ಲದೇ ಹೋಗಿದ್ದಾರೆ. ಆದ್ದರಿಂದ ವೈವಾಹಿಕ ಜೀವನ ಅಶುಭದಿಂದ ಕೂಡಿಕೊಂಡಿರುವುದಾಗಿ, ಮದುವೆ ಕಾಲ ಪ್ರಮಾದಗಳಿಂದ ಕಾದಿರುವುದಾಗಿ, ಎಷ್ಟೋ ರಸ್ತೆ ಅಪಘಾತಗಳು, ಅಗ್ನಿ ಪ್ರಮಾದಗಳು ಹೊಡೆದಾಟಗಳು ನಡೆಯುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ. ಯಾವುದೊ ಒಂದು ಆತಂಕ ಪ್ರಮಾದ ಉಂಟುಮಾಡುವ ವಿವಾಹಗಳನ್ನು ಕುರಿತು ಈಗಲಾದರೂ ಯೋಚಿಸಬೇಕಾಗಿದೆ.

ಜೀವನದಲ್ಲಿ ದೇವರ ಜ್ಞಾನಕ್ಕೆ ದೂರವಾಗುವುದಕ್ಕೆ, ದೈವಮಾರ್ಗಕ್ಕೆ ಅಡ್ಡವಾಗುವವರನ್ನು ವಿವಾಹಸಮಯದಿಂದ ಹೆಂಡತಿ ರೂಪದಲ್ಲಿ ಗಂಡ ಹೊಂದುತ್ತಿದ್ದಾನೆ. ಅದೇ ವಿಧವಾಗಿ ಗಂಡನರೂಪದಲ್ಲಿ ಹೆಂಡತಿ ಕೂಡ ಹೊಂದುತ್ತಿದ್ದಾಳೆ. ಹೆಂಡತಿ ತಲೆಗೆ ಜ್ಞಾನವನ್ನು ತುಂಬುತ್ತೇನೆಂದು ಅಕ್ಕಿಯನ್ನು ತಲಂಬರಗಳು ಎನ್ನುವ ಹೆಸರಿನಿಂದ ಹೆಂಡತಿ ತಲೆಮೇಲೆ ಸುರಿದ ಗಂಡ ಹೆಂಡತಿಗೆ ಜ್ಞಾನವನ್ನು ತಿಳಿಸುತ್ತಿಲ್ಲ. ಅದೇ ವಿಧವಾಗಿ ಗಂಡನ ತಲೆಗೆ ಜ್ಞಾನವನ್ನು ತಿಳಿಸುತ್ತೇನೆಂದು ಜ್ಞಾನಚಿಹ್ನೆಯಾದ ಚಂದ್ರನ ಧಾನ್ಯವನ್ನು ಜ್ಞಾನಕ್ಕೆ ಸಮಾನವಾಗಿ ತಿಳಿದು ಗಂಡನ ತಲೆಮೇಲೆ ಅಕ್ಕಿಯನ್ನು ಸುರಿದ ಹೆಂಡತಿ ಗಂಡನಿಗೆ ಜ್ಞಾನವನ್ನು ತಿಳಿಸುತ್ತಿಲ್ಲ. ಮದುವೆ ದಿನದಂದು ಕಾರ್ಯರೂಪದಲ್ಲಿ ಮಾಡಿದ ಕೆಲಸಗಳಿಗೆ ಅರ್ಥ ತಿಳಿಯದೆ ಮಾನವನು ಆ ದಿನದಿಂದ ಮತ್ತಷ್ಟು ಅಜ್ಞಾನದಲ್ಲಿ ಬಿದ್ದು ಹೋಗಿದ್ದಾನೆ. ಮನುಷ್ಯನಿಗೆ ವಿವಾಹಜೀವಿನ ಅಶುಭದಿಂದ ಕೂಡಿರುವುದಾಗಿ ಕರ್ಮವನ್ನು ಸಂಪಾದಿಸಿಕೊಳ್ಳುವುದರಲ್ಲಿಯೇ ಸರಿಹೋಗುತ್ತಿದೆ.

# ಸಂತಾನಪ್ರಾಪ್ತಿರಸ್ತು

ಅಶುಭಜೀವಿತ ಕಳೆಯುವುದರಲ್ಲಿ ಲಗ್ನವಾಗದವನಿಗೆ ಮತ್ತೊಂದು ಅಶುಭವನ್ನು ಸೂಚಿಸುವ ಬೈಗಳು ಆಶೀರ್ವಾದದ ರೂಪದಲ್ಲಿ ಇದೆ. ಅದೇ

**“ಸಂತಾನಪ್ರಾಪ್ತಿರಸ್ತು ಅಥವಾ ಶ್ರೀಘ್ರಮೇವ ಸಂತಾನಪ್ರಾಪ್ತಿರಸ್ತು”** ಇವುಗಳ ಅರ್ಥ ‘ನಿನಗೆ ಸಂತಾನ ಉಂಟಾಗಲಿ’ ಎನ್ನುವುದು. ಹೆಂಡತಿ ಬರುವಿಕೆಯಿಂದ ದೈವಮಾರ್ಗ ಎಂದರೆ ಏನೊ ತಿಳಿಯದೆ ಅದರ ಜ್ಞಾಪಕವಿಲ್ಲದಂತೆ ಹೋದ ಗಂಡನಿಗೆ, ಅದೇ ವಿಧವಾಗಿ ಗಂಡನ ಬರುವಿಕೆಯಿಂದ ದೇವರ ವಿಷಯವೇನೊ ತಿಳಿಯದೆ ಅದರ ಜ್ಞಾಪಕ ಕೂಡ ಇಲ್ಲದಂತೆ ಹೋದ ಹೆಂಡತಿಗೆ ಸಂತಾನದಿಂದ ಕಾಲವೆಲ್ಲ ಅವರಿಗೇ ವಿನಿಯೋಗವಾಗುವುದರಿಂದ ಸ್ವಲ್ಪವಾದರೂ ದೈವಜ್ಞಾನವನ್ನು ತಿಳಿದುಕೊಳ್ಳುವ ಅವಕಾಶವೇ ಇಲ್ಲದಂತೆ ಹೋಗುತ್ತದೆ. ಹೆಂಡತಿಗೆ ಅಥವಾ ಗಂಡನಿಗೆ ಸಂತಾನದಿಂದ ಪ್ರಪಂಚದಲ್ಲಿ ಲಗ್ನವಾಗುವುದಕ್ಕೆ ಅವಕಾಶ ಹೆಚ್ಚಾಗುತ್ತಿದೆ ಆದ್ದರಿಂದ ಕೆಲವರು ಜ್ಞಾನಿಗಳು ತಮ್ಮ ಹಾಡುಗಳಲ್ಲಿ **ಹೆಂಡತಿ ಮಾಯೆ, ಮಕ್ಕಳು ಮಾಯೆ** ಎಂದಿದ್ದಾರೆ. ಮಾಯೆ ದೇವರಿಗೆ ವಿರುದ್ಧ ದಿಕ್ಕಿನಲ್ಲಿ ನಡೆಸುವುದು. ಹೆಂಡತಿ ಮಕ್ಕಳು ದೈವಮಾರ್ಗಕ್ಕೆ ಆತಂಕಗಳೇ ಆದ್ದರಿಂದ ಅವರನ್ನು ಮಾಯೆ ಎಂದಿದ್ದಾರೆ. ಸಂತಾನ ಪ್ರಾಪ್ತಿರಸ್ತು ಎಂದರೆ ನೀನು ಇನ್ನೂ ಮಾಯೆಯಲ್ಲಿ ಆಳವಾಗಿ ಹೋಗೆಂದು ಹೇಳಿದಂತಿದೆ, ಆದ್ದರಿಂದ ಈ ವಾಕ್ಯವನ್ನು ದೂಷಣೆ ಪಕ್ಷದೊಳಗೆ ಸೇರಿಸುವುದಾಗಿದೆ. **“ಪುತ್ರ ಪ್ರಾಪ್ತಿರಸ್ತು” ಎಂದರೂ “ಸಂತಾನ ಪ್ರಾಪ್ತಿರಸ್ತು”** ಎಂದರೂ ಎರಡೂ ಒಂದೇ ವಿಧಾನವನ್ನು ತಿಳಿಸುತ್ತಿವೆ. ಈ ವಾಕ್ಯಗಳು ಸಂತಾನ ಇಲ್ಲದವರಿಗಾಗಲಿ, ಪುತ್ರರು ಇಲ್ಲದವರಿಗಾಗಲಿ ಸಂತೋಷವನ್ನು ಕೊಡುತ್ತದೆ. ಆದರೂ ದೈವಜ್ಞಾನರೀತ್ಯಾ ಅಷ್ಟು ಸಂತೋಷಿಸುವ ವಿಷಯಗಳೇನು ಅಲ್ಲ.

ಮೇಲ್ನೋಟಕ್ಕೆ ಒಳ್ಳೆಯದು ಮಾಡಿದಂತೆ ಕಾಣಿಸುವ ವಾಕ್ಯಗಳು ಆಶೀರ್ವಾದಗಳ ರೂಪದಲ್ಲಿ ಆಗ ಸಂತೋಷವನ್ನುಂಟುಮಾಡುವವಾಗಿ ಇದರೂ ಅವುಗಳಿಂದ ಅಶುಭವೇ ಕೈಗೂಡುತ್ತದೆ. ಆದ್ದರಿಂದ ಆಶೀರ್ವಾದದಂತೆ ಕಾಣಿಸುವ ವಾಕ್ಯಗಳನ್ನು ದೂಷಣೆಗಳಾಗಿ ಹೇಳುತ್ತಿದ್ದೇವೆ. ಹಾಗೆಯೇ ಮೇಲ್ನೋಟಕ್ಕೆ ಕೇಡು ಮಾಡುವಂತೆ ಕಾಣಿಸುವ ವಾಕ್ಯಗಳು ಇಂದಿನ ಕಾಲದಲ್ಲಿ ದೂಷಣೆಗಳಾಗಿ ಕಾಣಿಸುತ್ತಿದ್ದರೂ ಅವುಗಳಿಂದ ಶುಭವೇ ಕೈಗೂಡುತ್ತದೆ. ಆದ್ದರಿಂದ ದೂಷಣೆಗ

ಳಾಗಿ ಕಾಣಿಸುವ ವಾಕ್ಯಗಳನ್ನು ಆಶೀರ್ವಾದಗಳಾಗಿ ಹೇಳುತ್ತಿದ್ದೇವೆ. ದೈವಜ್ಞಾನ ಇರುವಾಗಲೇ ದೂಷಣೆಗಳ್ಯಾವುವು, ಆಶೀರ್ವಾದಗಳ್ಯಾವುವು ತಿಳಿಯಬಲ್ಲದು. ಜ್ಞಾನವಿಲ್ಲದವರಿಗೆ ಅವುಗಳ ತಾರತಮ್ಯ ತಿಳಿಯುವುದಿಲ್ಲ, ಆದ್ದರಿಂದ ಈಗ ನಾವು ಹೇಳಿದ ಬೈಗಳಲ್ಲಿರುವ ಜ್ಞಾನವನ್ನು, ಆಶೀರ್ವಾ ದಗಳಲ್ಲಿರುವ ಅಜ್ಞಾನವನ್ನು ಅವರು ಅರ್ಥಮಾಡಿಕೊಳ್ಳದೆ ಹೋಗಬಹುದು. ಸ್ವಲ್ಪ ಜ್ಞಾನ ತಿಳಿದು ನೋಡಿದರೆ ಬೈಗಳ ಜ್ಞಾನ ಆಶೀರ್ವಾದಗಳ ಅಜ್ಞಾನ ಸುಲಭವಾಗಿ ಅರ್ಥವಾಗುತ್ತದೆ. ಈ ಗ್ರಂಥದಲ್ಲಿ ಕೆಲವು ಆಶೀರ್ವಾದಗಳನ್ನು, ಕೆಲವು ದೂಷಣೆಗಳನ್ನು ಮಾತ್ರವೇ ತಿಳಿಸಿದ್ದೇವೆ. ಇನ್ನೂ ನಾವು ಹೇಳಿಕೊಳ್ಳದ ಮತ್ತಷ್ಟು ಆಶೀರ್ವಾದಗಳು, ಮತ್ತಷ್ಟು ದೂಷಣೆಗಳು ಕೂಡ ಇವೆ. ಅವುಗಳನ್ನು ಕೂಡ ಜ್ಞಾನದಿಂದ ಯೋಚಿಸಿ ನೋಡಿದಾಗಲೇ ವಾಸ್ತವಾಗಿ ಅವು ಯಾವುವೊ ತಿಳಿಯಬಲ್ಲವು.

ಈಗಿನ ಕಾಲದಲ್ಲಿ ಬೈಗಳನ್ನು ಸ್ವಲ್ಪ ಪರಿಶೀಲಿಸಿದರೆ ಅವುಗಳ ಸ್ಥಾನದಲ್ಲಿ ಅವುಗಳಂತಿರುವ ಕೆಲವು ವಾಕ್ಯಗಳು ಜಾಗಮಾಡಿಕೊಂಡಿವೆ. ವಾಸ್ತವವಾಗಿ ಅವು ಬೈಗಳು ಅಲ್ಲದಿದ್ದರೂ ಬೈಗಳಂತೆ ಚಲಾಮಣಿ ಆಗುವುದು ಚೋದ್ಯವಾಗಿದೆ. ಅವಾಚ್ಯ ಮಾತುಗಳನ್ನು ಕೆಲವನ್ನು ದೂಷಣೆಗಳಾಗಿ ಕೆಲವರು ಬಳಸುವುದರಿಂದ ವಾಸ್ತವವಾದ ದೂಷಣೆಗಳನ್ನು ಕೂಡ ಅವಾಚ್ಯ ಮಾತುಗಳಾಗಿ, ಅವಾಚ್ಯ ಮಾತುಗಳನ್ನು ದೂಷಣೆಗಳಾಗಿ ತಿಳಿಯುವುದಕ್ಕೆ ಅವಕಾಶವಿದೆ. ಅರ್ಥವಿರುವವು ದೂಷಣೆಗಳೆಂದು, ಅರ್ಥವಿಲ್ಲದೆ ಕೇವಲ ಅವಾಚ್ಯ ಮಾತುಗಳಿಂದ ಕೂಡಿಕೊಂಡ ಮಾತುಗಳು ದೂಷಣೆಗಳು ಅಲ್ಲವೆಂದು ಗುರುತಿಸಿಕೊಳ್ಳಬೇಕು. ಪೂರ್ವದಲ್ಲಿ ದೂಷಣೆಗಳನ್ನಾಗಲಿ, ಆಶೀರ್ವಾ ದಗಳನ್ನಾಗಲಿ ಜ್ಞಾನ ಹೊಂದಿದ ಗುರುಗಳು ಹೇಳುತ್ತಿದ್ದರು. ಕಾಲಕ್ರಮೇಣ ಪದ್ಧತಿಗಳು ಬದಲಾಗಿ ಆಶೀರ್ವಾದಗಳ ಸ್ಥಾನದಲ್ಲಿ ದೂಷಣೆಗಳು, ದೂಷಣೆಗಳ ಸ್ಥಾನದಲ್ಲಿ ಆಶೀರ್ವಾದಗಳು ನಿಂತುಹೋಗಿ ಅವುಗಳನ್ನು ಜ್ಞಾನ ಇಲ್ಲದವರು ಕೂಡ ಹೇಳುವುದು ನಡೆಯುತ್ತಿದೆ. ಅಷ್ಟೇಅಲ್ಲದೆ ಪೂರ್ವಕಾಲದ ಆಶೀರ್ವಾದಗಳು ಈಗಿನಕಾಲದ ಬೈಗಳಾಗಿ ಚಲಾವಣೆ

ಆಗುತ್ತಿರುವಾಗ ಅವುಗಳ ಸ್ಥಾನದಲ್ಲಿ ಅವಾಚ್ಯ ಮಾತುಗಳು ಕೂಡ ಸ್ಥಾನ ಮಾಡಿಕೊಂಡು ಅಜ್ಞಾನಿಗಳ ಬಾಯಲ್ಲಿ ತೋಯುತ್ತಿವೆ. ಜುಗುಪ್ಸಾಕರವಾಗಿ, ಅಹಸ್ಯವಾಗಿರುವ ಅವಾಚ್ಯ ಮಾತುಗಳನ್ನು ಕೆಲವು ಹಳ್ಳಿ ಪ್ರಾಂತಗಳಲ್ಲಿ ಬೈಗಳಾಗಿ ಬಳಸುತ್ತಿದ್ದಾರೆ. ಅವಾಚ್ಯ ಮಾತುಗಳೇ ಬೈಗಳು, ಅಸಲಾದ ಬೈಗಳು ಶಾಪನಾರ್ಥ ಗಳಾಗಿ ಕೆಲವರ ಲೆಕ್ಕದಲ್ಲಿವೆ. ಈಗಿನ ಕಾಲದಲ್ಲಿರುವ ಅವಾಚ್ಯ ಮಾತುಗಳನ್ನು, ದೂಷಣೆಗಳನ್ನು, ಆಶೀರ್ವಾದಗಳನ್ನು ವಿವರಿಸಿ ಹೇಳಿ ಅವುಗಳಿಗೆ ಸರಿಯಾದ ಅರ್ಥವಿದು ಎಂದು ಹೇಳುವುದೇ ಈ ಗ್ರಂಥವೊಂದರ ಮುಖ್ಯ ಉದ್ದೇಶ. ಆದ್ದರಿಂದ ಓದುಗರೆಲ್ಲರೂ ಸದುದ್ದೇಶದಿಂದ ಓದಿ ಅರ್ಥ ಮಾಡಿಕೊಳ್ಳಬೇಕೆಂದು ಕೋರಿತ್ತಿದ್ದೇವೆ.

**ಇಂತಿ**

**ತ್ರಿಮತ ಏಕೈಕ ಗುರು, ತ್ರೈತ ಸಿದ್ಧಾಂತ ಆದಿಕರ್ತ**

**ಶ್ರೀ ಶ್ರೀ ಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**ಒಂದು ವಿಷಯವನ್ನು ಸಮರ್ಥಿಸುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**

**ಅಸತ್ಯವನ್ನು ಸಾವಿರಜನ ಹೇಳಿದರೂ, ಅದು ಸತ್ಯ ಆಗುವುದಿಲ್ಲ ಸತ್ಯವನ್ನು ಸಾವಿರಜನ ಅಲ್ಲಗಳೆದರೂ, ಅದು ಅಸತ್ಯ ಆಗುವುದಿಲ್ಲ.**

**1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.**

**2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.**

**3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.**

**4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.**

**5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.**

**6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.**

**ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.**

**ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.**

**ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ**

**––ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

**Cell:09705864675, 09440556968, 09611133635**

# ಬೈಗುಳ ಜ್ಞಾನ-ಆಶೀರ್ವಾದಗಳ ಅಜ್ಞಾನ

## ಯೋಗೀಶ್ವರರವರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ಪ್ರಕಟನೆಗಳು

